# ಶೂದ್ರ

ಸಂ : ಎಂ. ಶ್ರೀನಿವಾಸ್




ಈ ಸಂಚಿಕೆಯಲ್ಲಿ :

ಬರ್ಟ್ರೆಂಡ್‌ರಸಲ್—ಜಿ. ಎಸ್. ಸಿದ್ಧಲಿಂಗಯ್ಯ—ಶಂಕರ ಪಾಟೀಲ—ಅನಿಲಕುಮಾರ ಮುಗುಳಿ
ನಿಸರ್ಗಪ್ರಿಯ—ಮಹೇಂದ್ರ ಪ್ರಸಾದ್—ಕಾ. ತ. ಚಿಕ್ಕಣ್ಣ—ನೀರದ್‌ಚೌದರಿ—ಬಿ. ಎ. ಶ್ರೀಧರ

ಒಳನೋಟ : ಪುರುಷೋತ್ತಮ. ಎ—ಕೆ. ಸತ್ಯನಾರಾಯಣ—ರಾಜಶೇಖರ್. ಸಿ.—ಬಿ ರಾಜಣ್ಣ

ಬೀದಿಮಾತು

ತಿಂಗಳ ತಿಪ್ಪೇಗುಂಡಿ



ಬೆಲೆ : 1 ರೂ.

...ವು ಸೃಷ್ಟಿಸುವ ಬರಗಾಲ; ನಿಮ್ಮ ಸೌಂದರ್ಯ ಪ್ರಜ್ಞೆಯನ್ನು ಹೆಚ್ಚಿಸುತ್ತದೆ ಅಲ್ಲವೇ ?

ಶೂದ್ರ

ಸಂಪುಟ : 5 ಜುಲೈ 1980 ಸಂಚಿಕೆ : 9

ಸಹಾಯಕ ಸಂಪಾದಕರು : ಪದ್ಮರಾಜ ದಂಡಾವತಿ
ಗೋ. ಶ್ರೀನಿವಾಸ್
ನಿರ್ಮಲ. ಎಸ್. ರೆಡ್ಡಿ

● ಶೂದ್ರಕ್ಕೆ ಚಂದಾ ಕಳಿಸಿಕೊಡಿ ● ಒಂದಷ್ಟು ಸಂಚಿಕೆಗಳನ್ನು ತರಿಸಿಕೊಂಡು ನಿಮ್ಮ ಗೆಳೆಯರಿಗೆ ಹಂಚಿ ● ನಿಮ್ಮ ಸುತ್ತ ಮುತ್ತ ಏನೇನೋ ನಡೆಯುತ್ತದೆ ಅದನ್ನು ಶೂದ್ರದಲ್ಲಿ ಏಕೆ ದಾಖಲು ಗೊಳಿಸಬಾರದು ? ● ಪುಟ್ಟ ಕತೆಗಳನ್ನು ಕಳಿಸಿಕೊಡಿ ಅನುವಾದವಾದರೂ ಚಿಂತೆಯಿಲ್ಲ.

ಮುಖ ಚಿತ್ರ : ಟೈಮ್ಸ್ ಪತ್ರಿಕೆಯ ಕೃಪೆ

ಶೂದ್ರ ಶ್ರೀನಿವಾಸ್, ನಂ. 29,
ವೆಂಕಟೇಶ್ ಬಿಲ್ಡಿಂಗ್, ಹೊಸೂರು ರಸ್ತೆ,
ನ್ಯೂ ಎಕ್ಸ್‌ಟೆನ್‌ಷನ್, ಮಡಿವಾಳ
ಬೆಂಗಳೂರು–560068.

**ವಾರ್ಷಿಕ ಚಂದಾ 12 ರೂ.**

## ಸಾದರ ಸ್ವೀಕಾರ :

ಬಡತನದ ಬಾಳು–ನಾಟಕ
ಲೇಖಕರು : ಡಿ. ಲಿಂಗಯ್ಯ
ದಿನಕರ ಪ್ರಕಾಶನ, ಬೆಂಗಳೂರು
ಬೆಲೆ : 8 ರೂ.

ಯಕ್ಷಗಾನ ತಾಳಮದ್ದಳೆ
ಲೇಖಕರು : ಬಾ. ಸಾಮಗ ಮಲ್ಪೆ
ತುಳುನಾಡು ಪ್ರಗತಿ ಪಕಾಶನಾಲಯ
ಮಲ್ಪೆ (ದ.ಕ.)
ಬೆಲೆ : 1 ರೂ.

ಫಾದರ್ ಸೆರ್ಗಿಯಸ್ – ಟಾಲ್‌ಸ್ಟಾಯ್
ಕನ್ನಡಕ್ಕೆ : ಟಿ. ಪಿ. ಅಶೋಕ
ಮಾನಸ ಪ್ರಕಾಶನ, 4ನೇ ಮುಖ್ಯ ರಸ್ತೆ,
ಜಯನಗರ, ಮೈಸೂರು-14.
ಬೆಲೆ : 5 ರೂ.

# ರಾಜಕಾರಣಿಗಳು

—ಬರ್ಟ್ರೆಂಡ್ ರಸೆಲ್

**ಒಂದು ಚಿಂತನೆ :**

ಒಂದು ದೇಶ ಎಷ್ಟೆಷ್ಟು ಪ್ರಜಾಪ್ರಭುತ್ವದೆಡೆಗೆ ಸಾಗುತ್ತಾ ಹೋಗುತ್ತದೆಯೋ ಅಷ್ಟಷ್ಟು ಜನತೆ ಆ ದೇಶದ ಆಡಳಿತಗಾರರ ಮೇಲಿಟ್ಟ ನಂಬಿಕೆ ಹಾಗೂ ಗೌರವ ಕಡಿಮೆಯಾಗುತ್ತಾ ಹೋಗುತ್ತದೆ ಎಂಬಂದು ಬಹು ಕುತೂಹಲಕರವಾದ ಸಂಗತಿ. ಆರಿಸ್ಟೋಕ್ರಸಿಯನ್ನಾಗಲೀ ಅಥವಾ ವಿದೇಶಿ ಆಕ್ರಮಣಕಾರರನ್ನಾಗಲೀ ಆ ದೇಶ ದ್ವೇಷಿಸಬಹುದೇ ವಿನಃ ಉಪೇಕ್ಷಿಸಲಾಗುವುದಿಲ್ಲ. ತಮ್ಮನ್ನು ಆಳಲಿಕ್ಕೆ ಆಯ್ಕೆ ಮಾಡಲ್ಪಟ್ಟ ಜನ ವಿಶ್ವಮಾನ್ಯರಾಗಿರಬೇಕು ಹಾಗೂ ಎಲ್ಲಾ ರಾಷ್ಟ್ರಗಳ ವಿಶ್ವಾಸವನ್ನೂಗಳಿಸಿಕೊಂಡಿರಬೇಕು ಎಂದು ಆಯಾ ದೇಶದ ಜನತೆ ಬಯಸುತ್ತದೆ. "ಇತರರ ವ್ಯವಹಾರಗಳ ನಿರ್ವಹಣೆಗೆ (ಇದು ಅತಿ ನಾಜೂಕಾದ, ಸೂಕ್ಷ್ಮವಾದ, ಹಾಗೂ ಜವಾಬ್ದಾರಿಯುತವಾದ ಕೆಲಸ.) ಧೀಮಂತರನ್ನು, ಅತ್ಯುತ್ತಮರನ್ನು ಮಾತ್ರ ಆಯ್ಕೆಮಾಡಲಾಗುವುದು," ಎಂದು ಭಾವಿಸಲಾಗಿದೆ.

ಆದರೆ ಸಾಮಾನ್ಯವಾಗಿ ಈ ರೀತಿ (ಮೇಲೆ ಹೇಳಿದ) ಆಗುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಪ್ರಜಾಪ್ರಭುತ್ವವಾದಿ ರಾಷ್ಟ್ರದಲ್ಲಿನ ಯಾರೂ ಕೂಡ "ರಾಜಕಾರಣಿ" ಅಥವಾ "Politician" ಎಂದು ಕರೆಸಿಕೊಳ್ಳಲು ಇಚ್ಛಿಸುವುದಿಲ್ಲ. ಆ ರೀತಿ ಕರೆದರೆ-ತನ್ನನ್ನು ಕುಚೋದ್ಯ ಮಾಡುತ್ತಿದ್ದಾರೆ, ಲೇವಡಿ ಮಾಡುತ್ತಿದ್ದಾರೆ ಎಂದೇ ಆತ ಭಾವಿಸುತ್ತಾನೆ. ಜನತೆಯ ವಿಶ್ವಾಸಗಳಿಸಿದ, ಒಳ್ಳೆಯ ಅಭಿಪ್ರಾಯಗಳಿಸಿದ ಯಾವನೊಬ್ಬನೂ (ಅಂತಹವರ ಸಂಖ್ಯೆ ಬಹಳ ಕಮ್ಮಿ) (ಜನತೆ) ಅವರ ವೋಟನ್ನು ಬೇಡುವ ಗೋಜಿಗೆ ಹೋಗುವುದಿಲ್ಲ. ಅಕಸ್ಮಾತ್ ವೋಟು ಕೇಳಲಿಕ್ಕೆ ಹೋದರೂ ಗೆಲ್ಲುವುದು, ಇಲ್ಲ ಕೂಡ. ಏಕೆಂದರೆ ಚುನಾವಣೆಯಲ್ಲಿ ಗೆಲ್ಲುವವರೇ ಬೇರೆ ಬಗೆಯ ಜನ. ಅವರು

ಪೂರ್ಣ ವಿಶ್ವಾಸಕ್ಕೆ ಅನರ್ಹರಾದಂತಹ ಬಗೆಯ ಉದ್ಯೋಗಸ್ಥರಾಗಿರುತ್ತಾರೆ (ನಾನು ಅತಿ ಉನ್ನತ ಸ್ಥಾನವನ್ನು ಅಲಂಕರಿಸುವವನ ಬಗ್ಗೆ ಯೋಚಿಸುತ್ತಿಲ್ಲ.)

ಈ ವಿಪರ್ಯಾಸವನ್ನು ಪ್ರಜಾಪ್ರಭುತ್ವದ ಮೂಲ ಪ್ರವರ್ತಕರು (ಮುಂಗಾಣು) ಮುಂಗಂಡಿರಲಿಲ್ಲ. ಅವರ ಕಾಲದಲ್ಲಿ ಪರಿಸ್ಥಿತಿ ಕೂಡ ಈ ರೀತಿ ಇರಲಿಲ್ಲ. ಪ್ರಜಾ ಪ್ರಭುತ್ವ ಇನ್ನೂ ಚಿಗುರುತ್ತಿದ್ದ ಕಾಲದಲ್ಲಿ ಮುಂಚೂಣಿಗೆ ಬರುತ್ತಿದ್ದವರೆಲ್ಲಾ ಶ್ರೇಷ್ಠ ರಾಗಿಯೇ ಇರುತ್ತಿದ್ದು, ಪ್ರಜಾಪ್ರಭುತ್ವ ಬೇರುಬಿಡುತ್ತಾ ಹೋದಂತೆ ಆ ಶ್ರೇಷ್ಠತೆಯ ಮಟ್ಟ ಇಳಿಯುತ್ತಾ ಹೋಯಿತು. ಇದೇಕೆ ?

ಈ ಮೇಲಿನ ಪ್ರಶ್ನೆಗೆ ಯಾರೂ ಉತ್ತರ ನೀಡಬಹುದು. "It is due to the Machine". ಎಂದು ಹೇಳಿ ಕೈತೊಳೆದುಕೊಳ್ಳುತ್ತಾರೆ. ಆದರೆ ಅದು ಅರ್ಧ ಉತ್ತರ ಮಾತ್ರ. ಏಕೆಂದರೆ ನಮ್ಮನ್ನು ನಾವೇ ಆ Machine ಗೇಕೆ ಒಪ್ಪಿಸಿಕೊಂಡು ಬಿಡುತ್ತೇವೆ ? ಎಂಬುದಕ್ಕೆ ಉತ್ತರ ಕೊಡುವುದಿಲ್ಲ. Satan ಹಾಗೂ Beelzebub ಅಧಿಕೃತ ಅಭ್ಯರ್ಥಿಯಾಗಿ ನಿಂತಾಗ, Archangel Gabriel ನಂತಹ ಸ್ವತಂತ್ರ ಅಭ್ಯರ್ಥಿಗಳೇಕೆ ಆಯ್ಕೆಯಾಗುವುದಿಲ್ಲ? ಇದು ಆಶ್ಚರ್ಯವಾಗಿ ಕಂಡರೂ ಸತ್ಯವಾದ ಸಂಗತಿ ತಾನೇ ?

ಒಂದು ಕಾರಣ ಹೀಗಿರಬಹುದು - ಸ್ವತಂತ್ರ ಅಭ್ಯರ್ಥಿಗಳಿಗೆ ಚುನಾವಣಾ ಪ್ರಚಾರಕ್ಕೆ ಸಾಕಾಗುವಷ್ಟು ಆರ್ಥಿಕ ಅನುಕೂಲತೆಗಳಿಲ್ಲದಿರುವುದರಿಂದ, ಜನರಿಗೆ ಹುಮ್ಮಸ್ಸನ್ನು ನೀಡುವಂತಹ ಯಾವುದೇ ತಂತ್ರ (ಸಾಮಾನ್ಯವಾಗಿ Full time ರಾಜಕಾರಣಿಗಳು ಇದರಲ್ಲಿ ನಿಪುಣರು) ವನ್ನು ಅವರು ಬಳಸಲಾಗುವುದಿಲ್ಲ. ಆದರೆ ಈ ಕಾರಣ ನಮ್ಮ ಮೂಲ ಪ್ರಶ್ನೆಗೆ ಪೂರ್ಣ ಉತ್ತರ ನೀಡುವುದರಲ್ಲಿ ಸಹಕಾರಿಯಾಗು ವುದಿಲ್ಲ. ಏಕೆಂದರೆ ಸ್ವತಂತ್ರ ಅಭ್ಯರ್ಥಿಗಳ ಚುನಾವಣಾ ನಿಧಿಗೆ ಏಕೆ ವಂತಿಗೆ ನೀಡು ವುದಿಲ್ಲ ? ಎಂಬ ಪ್ರಶ್ನೆಗೆ ಈ ಕಾರಣ ಉತ್ತರ ನೀಡುವುದಿಲ್ಲ. ಈ ಪ್ರಶ್ನೆಗೆ ಉತ್ತರ ಸಂದೇಹವೇ ಇಲ್ಲ ಇದು – ಸ್ವತಂತ್ರ ಅಭ್ಯರ್ಥಿಗಳು ಚುನಾಯಿತರಾಗುವ ಸಾಧ್ಯತೆ ಬಹಳ ಕಮ್ಮಿ. ಸಾಧ್ಯತೆ ಕಮ್ಮಿ ಆದ್ದರಿಂದ ಅವರಿಗಾರೂ ಮತ ನೀಡುವುದಿಲ್ಲ. ಆದರೆ ಈ ಉತ್ತರ ಸುತ್ತು ಬಳಸಿ ನಮ್ಮನ್ನು ಮತ್ತೆ ಮೂಲ ಪ್ರಶ್ನೆಗೇ ತಂದಿಡುತ್ತದೆ. ಸ್ವತಂತ್ರ ಅಭ್ಯರ್ಥಿ ಆಯ್ಕೆಗೊಳ್ಳುವ ಸಾಧ್ಯತೆ ಏಕಿಲ್ಲ ?

ಕೊಟ್ಟ ಕೊನೆಯ ಕಾರಣ ಇದಿರಬಹುದು - ಆಯಾ ಮತದಾರರ ಅಭ್ಯಾಸ ಬಲವೇ ಅವರು ಸ್ವತಂತ್ರ ಅಭ್ಯರ್ಥಿಗಳಿಗೆ ಮತ ನೀಡದಿರಲು ಕಾರಣವಾಗಿರಬೇಕು.

ಬಹಳಷ್ಟು ಮತದಾರರು ಯಾವುದೇ ನಿರ್ದಿಷ್ಟ ಅಭ್ಯರ್ಥಿಯ ಅರ್ಹತೆ, ಯೋಗ್ಯತೆಯು ಬಗ್ಗೆ ಸ್ವಲ್ಪವೂ ಗಮನಹರಿಸದೆ, ಹಿಂದೆ ಯಾವರೀತಿಯಲ್ಲಿ ಮತ ಚಲಾಯಿಸಿದ್ದರೋ ಹಾಗೆಯೇ ಈಗಲೂ ಚಲಾಯಿಸುತ್ತಾರೆ ; ತಮ್ಮ ಹಿರಿಯರು ಹೇಗೆ ಮತನೀಡಿದ್ದರೋ ಹಾಗೆಯೇ ಇವರೂ ಮತ ನೀಡುತ್ತಾರೆ.

ಏಕೆಂದರೆ ನನ್ನದೇ ಉದಾಹರಣೆ ತೆಗೆದುಕೊಂಡರೆ, ನಾನು ಲೇಬರ್ ಪಾರ್ಟಿಗೆ ಮತ ನೀಡಲು ಕಾರಣ ನನ್ನ ತಂದೆ ರ್‍ಯಾಡಿಕಲ್ ಆಗಿದ್ದುದು. ನನ್ನ ತಂದೆ ರ್‍ಯಾಡಿಕಲ್ ಆಗಲು ಕಾರಣ ನನ್ನ ಅಜ್ಜ ಲಿಬರಲ್ ಆಗಿದ್ದುದು. ನನ್ನ ಅಜ್ಜ ಲಿಬರಲ್ ಆಗಿರಲು ಕಾರಣ ನನ್ನ ಮುತ್ತಜ್ಜ Whig (ಟೋರಿಗಳಿಗೆ ಎದುರಾಗಿದ್ದ ರಾಜಕೀಯ ಪಕ್ಷ) ಆಗಿದ್ದುದು. ಅವರು Whig ಆಗಲು ಕಾರಣ ಅವರ ಮುತ್ತಾತಂದಿರಿಗೆ ಹೆನ್ರಿ (VIII) ನಿಂದ ಕ್ರೈಸ್ತ ದೇವಾಲಯದ ಭೂಮಿ (Abbey land) ಸಿಕ್ಕಿದ್ದಿದ್ದು.

ಹೀಗೆ ಸ್ವಾರ್ಥದ ಮೂಲದಿಂದಾಗಿ ಹುಟ್ಟಿದ್ದು ನನ್ನ ರ್‍ಯಾಡಿಕಾಲಿಸಂ ಆದ್ದರಿಂದ ಎಂದಾದರೂ ನಾನು ಕನ್ಸರ್ವೇಟಿವ್ ಆಗಲಿಕ್ಕೆ ಸಾಧ್ಯ ಇದೆಯೇ? ಕನ್ಸರ್ವೇಟೀವ್ ಆಗುವ ಆಲೋಚನೆಯೇ ನನಗೆ ದಿಗಿಲನ್ನುಂಟು ಮಾಡುತ್ತದೆ. ಅಭ್ಯಾಸಬಲದ ಹಿಡಿತ ದಿಂದ ಯಾರೂ ತಪ್ಪಿಸಿಕೊಳ್ಳಲಾಗುವುದಿಲ್ಲ. ಯಾರಿಗಾದ್ರೂ ಅದು ಸಾಧ್ಯವಾದ್ರೂ ಕೂಡ, ಆತ ತನ್ನಿಂದ ಏನನ್ನು ಸಾಧಿಸಲಾಗುವುದಿಲ್ಲ ಎಂಬ ಪರಿಸ್ಥಿತಿಗೆ ಇಳಿದುಬಿಡು ತ್ತಾನೆ. ಆದಾಗ್ಯೂ ಎಲ್ಲಿಯವರೆಗೆ ಅಭ್ಯಾಸಬಲ ತನ್ನ ಹಿಡಿತವನ್ನಿಟ್ಟುಕೊಂಡಿರುತ್ತ ದೆಯೋ ಅಲ್ಲಿಯವರೆಗೆ ರಾಜಕೀಯದಲ್ಲಿ ಒಳ್ಳೆಯವರಿಗೆ ಅವಕಾಶ ಕಮ್ಮಿ.

ಹಾಗಾದರೆ ಇದಕ್ಕೆ ಉಪಾಯವೇ ಇಲ್ಲವೇ? ಇದೆ. ಆದ್ರೆ It is a Matter of degree. ನಾವು ಅಭ್ಯಾಸಬಲಕ್ಕೆ ಸ್ವಲ್ಪ ಮಟ್ಟಿಗೆ ಬಲಿಯಾಗಬೇಕು. ಆದರೆ ನಾವು ಈಗ ಅಭ್ಯಾಸಬಲಕ್ಕೆ ಎಷ್ಟು ಬಲಿಯಾಗಿದ್ದೇವೆಯೋ ಅದಕ್ಕಿಂತ ಕಮ್ಮಿ ಬಲಿಯಾಗಲು ನಾವು ಪ್ರಯತ್ನಿಸಬೇಕು. ಈ ರೀತಿಯ "ಕಮ್ಮಿತನ"ವೇ ಬಹಳಷ್ಟು ವ್ಯತ್ಯಾಸಗಳನ್ನುಂಟುಮಾಡಬಹುದು. ಆದರೆ ಈ ಸಮಯದಲ್ಲಿ ಒಂದನ್ನಂತೂ ನಾವು ನೆನಪಿನಲ್ಲಿಟ್ಟುಕೊಳ್ಳಬೇಕು - ಪ್ರಜಾಪ್ರಭುತ್ವದಲ್ಲಿ ರಾಜಕಾರಣಿಗಳನ್ನು ಟೀಕಿಸುವುದೆಂದರೆ ನಮ್ಮನ್ನು ನಾವೇ ಟೀಕಿಸಿಕೊಂಡಂತೆಯೇ. ಏಕೆಂದರೆ We have the politicians we deserve (ನಮ್ಮ ಯೋಗ್ಯತೆಗೆ ತಕ್ಕಂತೆಯೇ ನಮ್ಮ ರಾಜಕಾರಣಿ ಗಳೂ ಇರುತ್ತಾರೆ).

ಅನು : **ಟಿ. ಎಸ್. ಶ್ರೀಧರರಾವ್**

• •

## ನಾನೊಬ್ಬನೇ

ಚಳಿಗೆ ನಡುಗಿ ಬೆಂಕಿ ಹಚ್ಚಿ
ಬೆಳಕ ತಂದು ಬೆಚ್ಚಗಾಗಿ
ನೀರ ಕುಡಿದು ಗಾಳಿ ತಿಂದು
ಶಬ್ದ ಮಾಡಿ ಕ್ರಾಂತಿ ಎದ್ದು
ಕೇಕೆ ಹೊಡೆದು ಕೈಯಮಾಡಿ
ಆಚೆ ಈಚೆ ನೋಡಲೇನಿ
ನಾನೊಬ್ಬನೇ !

ಬೆಳಕು ಭ್ರಾಂತಿ ಕತ್ತಲಾ
ಶಬ್ದ ಕ್ರಾಂತಿ ಸುಮ್ಮನಾಗಿ
ಬಿದ್ದ ನೀರು ಆರಿ ಹೋಗಿ
ತಂದ ಗಾಳಿ ಸೋರಿ ಹೋಗಿ
ನೆತ್ತಿ ನಡುಗಿ ಸುತ್ತ ತಿರುಗಿ
ಅತ್ತ ಇತ್ತ ನೋಡಲೇನಿ
ನಾನೊಬ್ಬನೇ !

ನಾನು ನೀನು ಒಂದೇ ಎಂದು
ಪರಮ ಆತ್ಮ ನೀನೇ ಎಂದು
ಹನಿಯು ಬಿಟ್ಟು ಹಳ್ಳ ಸೇರಿ
ನನ್ನ ಮರೆತು ನಿನ್ನ ಸೇರಿ
ಶಾಂತಿಯಿಂದ ಪ್ರೀತಿ ತಂದು
ಸುತ್ತ ಮುತ್ತ ನೋಡಲೇನಿ
ನಾನೊಬ್ಬನೇ !

ಶಂಕರ ಪಾಟೀಲ

---

## ನೀನು–ನಾನು

ನೀನು,
ಬ್ರೈಲ್
ಲಿಪಿಯಲ್ಲಿ ಬರೆದ
ಒಂದು
ವಾಕ್ಯ
ನಾನು, ನಿನ್ನ
ಪ್ರತಿಯೊಂದು ಅಕ್ಷರಗಳ
ಎಲ್ಲ
ಒಳಹೊರಗಳನ್ನು
ಕೈಯಿಂದ ತೀಡಿ,
ಅರ್ಥ
ಮಾಡಿಕೊಳ್ಳಲು
ಹೆಣಗಾಡುತ್ತಿರುವ
ಅಂಧ

—ಅನಿಲಕುಮಾರ, ಮುಗಳಿ

## ಕತ್ತೆ

ಕನ್ನಡ ಭಾಷಾಶಾಸ್ತ್ರ ಓದುತ್ತಿದ್ದಾಗ
ವಿದ್ವಾಂಸರೊಬ್ಬರು
ಹೇಳಿದ್ದು ನನಗೆ ಚೆನ್ನಾಗಿ ನೆನಪು:
ಕತ್ತೆ ನಮ್ಮದಲ್ಲ
ಬಹುಶಃ ಅರಬ್ಬೀ ದೇಶದಿಂದ ಬಂದಿದೆ
ಕುದುರೆ ಕೂಡ ಅಷ್ಟೆ
ಅಲ್ಲಿಂದಲೇ ಬಂದಿರಬೇಕು
ಎರಡೂ ಚತುಷ್ಪಾದಿಗಳೆ
ಒಂದು ಜಾತಿ ಚೆನ್ನಾಗಿ ಭಾರ ಹೊರುತ್ತೆ
ಮತ್ತೊಂದು ಚೆನ್ನಾಗಿ ಓಡುತ್ತೆ
ಎಂದರು
ಸ್ವರಗಳಲ್ಲಿ ವ್ಯತ್ಯಾಸವಾಗಿದೆ
ವ್ಯಂಜನ ಒಂದೇ ಎಂದರು
ಅಲ್ಲ, ಆ ಘನಂತರ ವಸ್ತು
ಅಲ್ಲಿಂದ ಬರಬೇಕೆ,
ನಮ್ಮಲ್ಲಿರಲಿಲ್ಲವೇ ಅನ್ನಿಸುತ್ತೆ
ನಿಜವಾಗಿ ನನಗನ್ನಿಸುತ್ತದೆ
ಕತ್ತೆ ನಮ್ಮದೇ ಎಂದು
ನಿಮಗೂ ಹಾಗೇ ಅನ್ನಿಸುವುದಿಲ್ಲವೇನು ?

ಜಿ. ಎಸ್. ಸಿದ್ಧಲಿಂಗಯ್ಯ

# ವಠಾರದ ಬಸಕ್ಕ

ನಮ್ಮೂರ ಮಠದಪವೃಳಿಗೆ
ಕಡೆದು ಕಲ್ಲನು ಜಡಿದು
ಸಿಕ್ಕಿಸಿದ ಕಡೆ
ಹಲವಾರು ವಯ್ಯಳಿಸಿ ಕೊಂಕಕಡೆ
ಕೊನರಿ ಬಂದಳು ಈಕೆ ಪವಾಡದಂತೆ.

ಪಾಮರರ ಕಣ್ಣಿಗೆ
ದೇವರೆಡೆಯಾದಿವಳು
ಗರ್ಭಗುಡಿಯಲಿ ಐಕ್ಯ
ಅಯ್ಯಗಳ ಜೊತೆಗೆ.

ಲಿಂಗ ಪೀಟದ ಮೇಲೆ
ಪಂಚಮುಖ ಪರವಶನ
ಪಂಚ ವಿಂಶತಿ ರೀತಿಗಳಲ್ಲಿ
ಲೀನವಾದಿವಳು–
ಪಂಚೆಪಂಚೆಗೆ
ಪಂಚಪ್ರಾಣದ ಹಾಗೆ
ಕಾವೇರಿ ಕಾವಿಯಲಿ
ಮರೆಯಾದಳು.

ಸಾರಜನಕರ ಗುಪ್ತ ಪೋಷಣೆಗೆ
ಬಿತ್ತಿದವರ ಬಲವಂತಕ್ಕೆ
ಹೊಡೆ ಹೊತ್ತು ನಿಂತಳು ಮತ್ತೆ ಬೆಳೆಯಾಗಲು.
ಹಸಿರುಂಟು ಜೀವಕ್ಕೆ
ತೆನೆ ಹೆರುವ ನೋವುಂಟು
ತೆನೆಯ ಮೇಲೆಯೇ ಕಾಳು ಮೊಳೆತುದುಂಟು.

ಗಿಡದೊಳಗೆ ಗಿಡ ಬೆಳಸಿ
ಮಣ್ಣು ಸಕ್ಕರೆ ಮಾಡಿ
ಬೆಳೆದವರೇ ಮತ್ತೆ ತಿನ್ನುವುದೂ ಉಂಟು.
ಇದಕಾಗಿ ರೋಸಿದಳು
ಹೆಣ್ಣಾಗಿ ಹೇಸಿದಳು
ವಾಸಬಂದಳು ನಮ್ಮ ಹಳೆಯ ವಠಾರಕ್ಕೆ.

ಕಟ್ಟರಿದ ಪಂಜಾಗಿ
ಹಳಿದವರ ನಂಜಾಗಿ
ಝಗಿಸಿ ಉರಿದಳು
ಬೀದಿ ಬಸವಿಯಾಗಿ.

ಮರುಗಿದರೆ ಮನದೊಳಗೆ
ನೀರಾಗಿ ಕರಗುವಳು
ಕರೆದವರ ಹಳ್ಳದಲಿ
ತೊರೆಯಾಗಿ ಹರಿಯುವಳು
ಮೆರೆದವರ ತಿರಿಸಿದಳು
ಕಮ್ಯ ಬರಿ ಮಾಡಿದಳು
ವ್ಯೆಯ್ಯ ಹಾಗೆ.

ಕಟ್ಟಳೆಯ ಕಟುಕರಿಗೆ
ಬೆಳ್ಳನೆಯ ಕಳ್ಳರಿಗೆ
ರಾಜಕೀಯದ ರತ್ನಗರ್ಭಕೋಳ
ದೇಶರಿಗೆ, ತೆರೆದ ಬಾಯಿಗೆ
ಬಾಗಿ ತುಬಿಯುಪ್ಪನಿಟ್ಟಳು
ಅಲ್ಲಿ ಚಪ್ಪರಿಸಿದರು
ಇಲ್ಲಿ ತುಪ್ಪಿದರು,

ಬಸಕ್ಕ—
ದೂಡಿದರೆ ತುಡಿಸುವಳು
ಕೂಡಿದರೆ ಕುಣಿಸುವಳು

ಒಗ್ಗಿದರೆ ಇವಳು
ಉಪ್ಪಿಗಿಂತಲು ಅಗ್ಗ,
ಬಸಕ್ಕನ ಮನೆಯೊಳಗೆ ಬೆಳೆದ ನೀತಿಯು ಬೆಕ್ಕು
ಮಾತು ಕಲಿತಿದೆ ಈಗ ಗಿಳಿಯ ಹಾಗೆ
ನೀತಿಯಲಿ ಗದರುತಿದೆ ಹುಲಿಯ ಹಾಗೆ
ಬೆಕ್ಕಿನ ಹಣೆಗಿವಳು ತುಪ್ಪದ ಬಟ್ಟಿಟ್ಟು
ವಾಸನೆಯ ತೋರುವಳು,
ನಾಲಗೆಯ ಹೊರಚಾಚಿ, ಮುಂಗಾಲ ತಲೆಗೊತ್ತಿ
ಸುತ್ತಿಗರ ಗರಸುತ್ತಿ, ಗಿರಗಟ್ಟೆಯಾಡುತಿದೆ
ಬಸಕ್ಕ ಇಟ್ಟ ಬಟ್ಟಿನ ತುಪ್ಪ
ನಾಲಗೆಗೆ ಸಿಗುವುದೇನೋ ಕಾದುನೋಡಬೇಕು.

ನಿಸರ್ಗಪ್ರಿಯ

—o—

## ನತದೃಷ್ಟರು

ನತದೃಷ್ಟರ ಮೇಲೆ ಕವನ ಬರೆಯಬೇಕೆಂದಿದ್ದೆ.
ಕಣ್ಣಿನಲಿ ನೀರು ಅಣೆಕಟ್ಟೆಯಾಗಿ ತುಂಬಿತು,
ಉಕ್ಕಿ ಹರಿದು ಕಾಗದ ಒದ್ದೆಯಾಯಿತು—
ಕೈಲಿದ್ದ ಲೇಖನಿಯು ಕೆಳಗಿಟ್ಟೆ,
ಕಣ್ಣೀರಿನಲಿ ಒದ್ದೆಯಾದ ಹಾಳೆಯನು
ಜನರಿಗೆ ತೋರಿಸಲೇ ?
ಅವರಿಗೆ ಅರ್ಥವಾಗುತ್ತದೆಯೇ ?
ಅವರು ನತದೃಷ್ಟರು.

ಚೀನೀಕವಿ ಫೆಂಗ್ ಕ್ಷೂಫೆಂಗ್
ಕನ್ನಡಕ್ಕೆ : ಭಗವಾನ್

# ಕ್ರಾಂತಿಯ ಗೆಳತಿಗೊಂದು ಪತ್ರ

ಕ್ರಾಂತಿಯ ಮುಂಚೂಣಿಯಲ್ಲಿ ನಿಂತ ನಾಯಕ
ತನ್ನ ಪ್ರಿಯ ಗೆಳತಿಗೆ
ಪತ್ರ ಬರೆಯುವಾಗ
ಕನಸುಗಳ ಕತೆಯನ್ನು ಹೇಳಲಿಲ್ಲ
ಆಶೆಯ ಸೆರಗನ್ನು ಹಿಡಿಯಲಿಲ್ಲ
ಮಾಸಿಹೋದ ನೆನಹುಗಳ ಎಣಿಸಲಿಲ್ಲ
ಹಸಿ - ಹಸಿ ಪ್ರೀತಿಯ ಕಂತೆಯನ್ನು ಬಿಚ್ಚಲಿಲ್ಲ

ಬರೆದದ್ದು ಅವನ ಒಡಲ ಬೇಯಿಸಿದ
ನೋವಿನ ಕಡಲತೆರೆಗಳಲ್ಲಿ ಹಾಯ್ದು
ಬಯಲಾದ ಸತ್ಯಗಳ ಪದರುಗಳನ್ನು

ಬಯಸಿದ್ದು ಆ ಗುಡ್ಡದಂಚಿನ ನಡೆಯಲ್ಲಿ
ಕೆಂಡ - ಉರಿವ ಕೆಂಪಾದ ಸೂರ್ಯ
ಭೂಮಿಗಿಳಿದ - ಬದುಕಿನಾಚೆಯ
ಮುಸ್ಸಂಜೆಯ ಮೃದುಸ್ಪರ್ಶವನ್ನಲ್ಲಿ

ಪ್ರಖರ ಮಬ್ಬಿನ ಸುಳಿಗಳಾಚೆಗೆ
ಮೊಗ್ಗುಗಳರಳುವ ಮುಳ್ಳುಗಳಾಚೆಯ
ಹಸಿರ ಬೆಟ್ಟದ - ಮನದಾಳದುರಿಯ
ಹತ್ತಿನಿಂತ ಕ್ರಾಂತಿ ನೆತ್ತಿಯನ್ನ

ಆಶಿಸಿದ್ದು
—ನಂತರದ
ವಿಶಾಲ ಪ್ರೀತಿಯನ್ನು

—ಮಹೇಂದ್ರ ಪ್ರಸಾದ್

## ನುಂಡೆ ಬಿಟ್ಟವರು

ಕಾ. ತ. ಚಿಕ್ಕಣ್ಣ

**ಕತೆ :**

ನನ್ನ ಊಹೆ ನಿಜವಾಗಿತ್ತು.

ಪುಟ್ಟರಾಜ ಬರುವ ಹೊತ್ತಿಗೆ ನನ್ನಲ್ಲಿ ಏರಿದ್ದ ಸಿಟ್ಟು ಅಷ್ಟಾಗಿ ಉಳಿದಿರಲಿಲ್ಲವೆಂದೇ ಹೇಳಬೇಕು. ಅವನು ನಿಜವಾಗಿಯೂ ನನ್ನ ಮಟ್ಟಿಗೆ ಒಳ್ಳೆ ಹುಡುಗನಾಗಿದ್ದ. ಅಜ್ಜಿಯ ಮನೆಯಲ್ಲಿದ್ದುಕೊಂಡು ಓದಲು ನಾನಿಲ್ಲಿಗೆ ಬಂದಾಗ ನನ್ನೊಡನೆ ಸದಾ ಕಲೆತಾಡಿದ್ದ ಗೆಳೆಯ ಅವನು. ಆಗ ನಾನೆಂದರೆ ಅವನಿಗೆ ಎಲ್ಲವೂ ಆಗಿಬಿಡುತ್ತದೆ. ಆದರೆ ನಾನು ಈ ಊರಿಗೆ ಅಪರೂಪವಾಗತೊಡಗಿದಂತೆ, ಅವನು ಈ ಊರಲ್ಲೇ ಉಳಿದಂತೆ ನನಗಿಲ್ಲದ ಸಂಕೋಚ ಅವನಿಗೆ ಅನಿಷ್ಟವಾಗಿ ಬರತೊಡಗಿ ನಮ್ಮ ಗೆಳೆತನಕ್ಕೆ ತೆರೆ ಎಳೆದಂತಾಗಿದೆ. ಈ ಸಂಕೋಚದಿಂದಲೂ ಇರಬೇಕು–ನನಗವನು ಬಕಪಟಿಗೆ ಸಿಕ್ಕುವುದಿಲ್ಲ.

ಇಂದೂ ಹಾಗೇ ಆಯಿತು. ಬಂದವನು 'ಯಾವಾಗ ಬಂದೆ' ಅಂತ ಯಾಂತ್ರಿಕವಾಗಿ ಕೇಳಿದ್ದರಲ್ಲಿಯೂ ಬದಲಾವಣೆಯ ಗುರುತ್ತಿತ್ತು, ನಾನು ಅವನನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲು ನಡೆಸಿದ ಪ್ರಯತ್ನವೂ ಸಫಲವಾಗಲಿಲ್ಲ ನಾನೀಗ ಮುಖ್ಯ ವಿಷಯದತ್ತ ಬರಬೇಕಿತ್ತು.

"ನಿನ್ಮ್ಯಾಲೆ ನಂಗೊಂದು ಚೂರು ಸಿಟ್ಟಿಲ್ಲ. ಕೆಟ್ಟ ಭಾವನೆಯೂ ಇಲ್ಲ. ಪುಟ್ಟ ನಿಜ ಹೇಳು—ನೋಡು ನನ್ನ ಕಣ್ಣಲ್ಲಿ ಕಣ್ಣಿಟ್ಟು ಹೇಳು ಏನ್ ನಡೀತು ಅಂತ" ಅಂದೆ ಅಂಗಲಾಚುವಂತೆ ಮತ್ತು ನೇರವಾಗಿ.

ನನ್ನ ಕಾತರಕ್ಕೆ ನೀರೆರಚುವಂತೆ ಎತ್ತಲೋ ನೋಡುತ್ತ ಅಂದ : "ಅದೆಲ್ಲ ಮುಗೀತಲ್ಲ ಮತ್ತೆ ಈಗ್ಯಾಕದು ಬುಡು" ಮಾಡಿಧ ತಪ್ಪನ್ನು ಒಪ್ಪಿಕೊಳ್ಳುವ ಬದಲು

ಅದನ್ನು ನಿರ್ಲಕ್ಷಿಸಿಬಿಡುವ ಉದ್ಧಟತನ ಇವನಲ್ಲಿಯೂ ಕಂಡಾಗ ನನಗೆ ರೋಸಿ ಹೋಯಿತು. ಕೊನೆಯದಾಗಿ ಪುಟ್ಟರಾಜನೊಬ್ಬ ನನ್ನು ಕೇಳಬೇಕೆಂದು ತವಕಿಸಿದ್ದು ಇದಕ್ಕಲ್ಲ—ಹುಬ್ಬು ಕುಣಿಯಿತು. ಮೈ ಸೆಟೆದು ಹೇಳಿದೆ.

"ನೀರಿಗೆ ಹೊಂಟಿದ್ದ ಮಾಲಿಂಗಿ, ಗಾಡಿ ಚಕ್ರಕ್ಕೆ ಪಟ್ಟೆ ಬುಡುಸ್ತಾ ಅಳ್ಳಿಮರ ದಂಡಿ ಕೂತಿದ್ದ ನಿಮ್ಮ ಗುಂಪಿನ ಕಣ್ಣಿಗೆ ಬಿದ್ಧಳು. ಹೊಸದಾಗಿ ಸಾಲಿಗ್ರಾಮದ ಟೆಂಟಲ್ಲಿ ನೋಡ್ಕೊಂಡು ಬಂದಿದ್ದ ಗೆಂಡೆತಿಮ್ಮ ಇನ್ನೂ ನಿಮ್ಮ ಮನಸ್ನಲ್ಲೇ ಇದ್ದ ನೇನೋ. ಅವನಂಗೇ ಇವಳ ಗಂಡನೂ ಅನ್ನಿಸ್ತು ಯಾಕೊ ಅವಳ್ನ ಹಿಂದಿನಿಂದ ನೋಡಿದಾಗ. ಇಂಥ ಹೆಣ್ಗೆ ಆ ಗೆಂಡೆತಿಮ್ಮ ಎಂಥ ಸುಖ ತಾನೆ ಕೊಟ್ಟಾನು? ಇವಳ ಬಗ್ಗೆಯೂ ಗುಲ್ಲೆದ್ದಿದೆಯಲ್ಲೋ" ಅಂದ ರುದ್ರಾಚಾರಿಯ ಮಾತು ನಿಮಗೆಲ್ಲ ಆಕರ್ಷಕವಾಗಿ ವಿಚಿತ್ರ ಖುಷಿ ಕೊಡ್ತು. ಬೆದೆ ಹತ್ತಿದ ನಮಗೆ ಕಳಿತ ಹೆಣ್ಣಿನಂತೆ ಕಂಡ ಮಾಲಿಂಗಿಯ ವಿಷಯ ಎಳೆದಂತೆಲ್ಲ ರಂಗೇರಿಸತೊಡಗಿತು, ಆ ಮಗನಿಂತಿದ್ದ ಯಂಕನ ಬೇಕಂತಲೆ ಛೂ ಬಿಟ್ರಿ. ಅವಳ್ನ ಕೈಗೆ ಹಾಕ್ಕೊ ಅಂತ ಪುಸಲಾಯಿಸಿದ್ರಿ. ನಿಮ್ಮ ಮಾತಿನ ತೀಟೆಗೆ ಮರುಳಾದ ಯಂಕ ಮನಸ್ನ ಹುರಿ ಮಾಡ್ಕೊಂಡ. ಪರಿ ಹಾರಕ್ಕಾಗಿ ಶಂಕ್ರಿ ಮೊರೆ ಹೋದ, ಆ ಶಂಕ್ರಿ ತಲೆದೂಗಿ ಮುಂದಾದ. ಆದ್ರೆ ಮಾಲಂಗಿ ಬೆಂಕಿ ಕೊಳ್ಳಿಲಿ ಬಾರಿಸಿ ಕಳಿಸಿದ್ಲು. ಮಾನ ಹೋಗಬಾರದು ಅಂತ ಬೆಂಕಿ ಗಾಯಕ್ಕೇನೋ ಬೇರೆ ನೆಪ ಕೊಟ್ಟು, ಅದು ಮಾದ ಮೇಲೆ ಸಮಯದ ಹದ ಪರಿತು ಬೆಂಗಾವಲಿಗೆ ಭಂಟರ ನೇಮಿಸಿಕೊಂಡು ಶಂಕ್ರ ಮಾಲಿಂಗಿಯ ಮುಗಿಸಿದ. ಹಿಂಗೇ ತಾನೆ ಆದದ್ದು ? ?"

ನಡೆದ ಕಥೆಯನ್ನು ಪಟಪಟನೆ ಅಂದು ಮುಗಿಸಿ ಇದನ್ನಾದರೂ ಒಪ್ಪಿಕೊಳು ವಂತೆ ಅವನ ಮುಖವನ್ನೇ ದುರುದುರು ನೋಡಿದೆ. ಇಷ್ಟು ವಿವರವಾಗಿ ಗೊತ್ತಿಲ್ಲ ವೆಂದುಕೊಂಡಿದ್ದೆನೇನೋ—ಒಪ್ಪಿಕೊಳ್ಳುವ ಸ್ಥಿತಿಯಲ್ಲಿ ಅವನಿರಲಿಲ್ಲ. ಒಮ್ಮೆ ಮುಖ ನೋಡಿ ಮತ್ತೆ ನೋಟ ತಪ್ಪಿಸಿ "ಇದೆಲ್ಲ ಯಾರೋ ಹೇಳಿದ ಕಟ್ಟುಕಥೆ. ಸುಮ್ಮೆ ಶಂಕ್ರಿ ಮೇಲೆ ಅನ್ಯಾಯ ಪೂರುಸ್ತಾ ಅವ್ರೆ" ಎಂದವನೇ ಅಲ್ಲಿ ನಿಲ್ಲದೇ ನಡೆದೇಬಿಟ್ಟ. ಅವನ ಆ ಧಾಟಿ ನೋಡಿ ನಾನು ಇನ್ನಷ್ಟು ದಂಗಾದೆ.

ಮಾಲಿಂಗಿಯ ಈ ಸ್ಥಿತಿಗೆ ಒಂದು ವಿಷಜಂತು ಕೂಡಿಲ್ಲ ಅದರ ವರ್ತುಲವೇ ಇರುವುದು ಅರಿವಾಯಿತು. ಆದರೆ ಒಬ್ಬೊಬ್ಬರೂ ಒಂದೊಂದು ರೀತಿ ಜಾರಿ ಹೋಗುತ್ತಿದ್ದ ಕಂಡು ಹತಾಶಗೊಳ್ಳತೊಡಗಿದೆ, ನಮ್ಮೂರಿಗಿಂತಲೂ ಹೆಚ್ಚಾಗಿ. ಈ ಊರಿನಲ್ಲಿ ಆಡಿ ಬೆಳೆದವನು ನಾನು. ಅದಕ್ಕಾಗಿಯೇ ಇರಬೇಕು ಈ ಊರಿನ ಬಗ್ಗೆ ಒಂದು ವಾಂಛಲ್ಯ.

ಅಜ್ಜಿ ಮನೆಯ ನಂಟು ತಮ್ಮ ತಲೆಗೇ ನಿಂತುಹೋಗಬಾರದು ಅಂತ ಅಪ್ಪ ಒತ್ತಾಸೆಯಿಂದ ಇದ್ದ ಒಬ್ಬನೇ ಮಗ ಉಜಿನಿಗೆ ಮಾಲಿಂಗಿಯನ್ನು ಕೊಟ್ಟು ಮದ್ವೆ ಮಾಡೋ ಹೊತ್ತಿಗೆ ನಾನು ಈ ಊರು ಬಿಟ್ಟು ಎಷ್ಟೋ ವರ್ಷಗಳಾಗಿದ್ದವು. ಅಪ್ಪ ಅವರನ್ನು ಕಳಕೊಂಡಿದ್ದ ಉಜಿನಿಯ ವ್ಯಕ್ತಿತ್ವ ಚುರುಕಾಗಲಿಲ್ಲ. ವಯಸ್ಸು ಏರ್ತಾ ಬಂದರೂ ಅವನು ಒಂದು ರೀತಿ ಮೆಡ್ಡನಾಗಿಯೇ ಬೆಳೆದ. ಹೇಗೋ ಏನೋ ನಾನು ಹೊರಗಿನವನೆನಿಸಿದಂತೆ ನನ್ನ ಮೇಲೆ ಅವನು ಬೆಳೆಸಿಕೊಂಡ ವಿಚಿತ್ರಗೌರವ ಬರಬರುತ್ತ ಅಂಜಿಕೆಯ ಮುದ್ದೆಯಾಗಿಸಿತ್ತು. ಊರಿಗೆ ಆಗೊಮ್ಮೆ ಈಗೊಮ್ಮೆ ಬಂದಾಗಲೂ ನನ್ನ ಮುಂದೆ ನಿಂತು ಮಾತಾಡುವ ವ್ಯವಹಾರಿಕತೆಯೂ ಅವನಲ್ಲಿ ಬೆಳೆಯಲಿಲ್ಲ.

ಈಗ ಮಾಲಿಂಗಿಯ ವಿಚಾರ ಕೇಳಿದರೆ ತಲೆ ತಗ್ಗಿಸುತ್ತಾನೆ ತೀರ ಅಸಹಾಯಕನಂತೆ. ಈ ಪ್ರಕರಣ ನಡೆದುಹೋದಾಗ ಕೆಲವರ ಒತ್ತಾಯದ ಮೇಲೆ ನ್ಯಾಯಕ್ಕೆ ಸೇರಿಸಿದನಂತೆ. ಆದರೆ ಹುಲಿಯಂತೆ ಮೇಲೆರಗಿದ್ದ ಹೆಣ್ಣನ್ನು ಇಲಿಯಂತೆ ಮಾಡಿ ಮುಗಿಸಿದ ಗಂಡುಮಕ್ಕಳ ಸಾಹಸಕ್ಕೆ ಮೌನ ಸಮ್ಮತಿ ಕೊಟ್ಟು ಸುಮ್ಮನಾಗಿದ್ದ. ವೃತ್ತಿ ಗೌರವವುಳ್ಳ ಶಂಕರಪ್ಪನ ಪ್ರಭಾವಕ್ಕೆ ಒಳಗಾದವರು ನ್ಯಾಯಕ್ಕೆ ಸೇರಲಿಲ್ಲವಂತೆ. ಸೇರಿದ್ದ ಕೆಲವೇ ಕೆಲವರು "ಏನೊ ಹುಡುಗಮುಂಡೇವರ ಕೆಲ್ಸ. ಅವರಿಗೆಲ್ಲ ನಾವು ಚೆನ್ನಾಗಿ ಉಗಿದಿದ್ದೀವಿ. ಇದನ್ನು ಕೆಂಟ್ತ ಹೋದ್ರೆ ನಿಮ್ಮದೇ ಮಾನಗೇಡು, ಅಷ್ಟಕ್ಕೂ ಅಷ್ಟು ಜನದಲ್ಲಿ ಎಲ್ರೂ ಸುಳ್ಳು ಅಂತ ಹೇಳ್ತಾ ಅವರೆ. ಏನೇ ಆಗ್ಲಿ ಇಂಥಾದಕ್ಕೆ ಅವಕಾಶ ಕೊಡಬಾರ್ದು. ಇಲ್ಲಿಗೆ ಇದನ್ನು ಮುಗಿಸ್ಬುಡಿ" ಎಂದು ಗುಟ್ಟಾಗಿ ಕರೆದು ಸಾರಿಸಿ ಕಳಿಸಿದ್ದರಂತೆ.

ಮಾಲಿಂಗಿಯೋ ಇನ್ನೂ ಭಿನ್ನ. ಹೆಚ್ಚು ಮಾತೂ ಕೂಡ ಆಡೋದಿಲ್ಲ. ಪ್ರತಿಕ್ರಿಯಿಸುವ ಹವ್ಯಾಸವನ್ನೇ ಬೆಳೆಸಿಕೊಳ್ಳಲಿಲ್ಲ. ಅದಕ್ಕಾಗಿಯೋ ಇತ್ತೀಚೆಗೆ 'ಒಳ್ಳೆ ಗಂಡ ತಿಮ್ಮನಂಥ ಗಂಡನ ಕೂಡಿಕೊಂಡ್ರೂ ಹೆಂಗೆ ಸಂಸಾರ ಮಾಡ್ತಾದೆ ಈ ಹೆಣ್ಣು' ಅಂತ ಅನ್ನಿಸಿಕೊಂಡಿದ್ದಳಂತೆ. ಗಂಡನ ಮೃದುತ್ವದ ಮೇಲಿದ್ದ ಒಂದು ಥರದ ಮಮತೆ, ಅವನ ಮೆಡ್ಡತನದ ಮೇಲಿದ್ದ ಇನ್ನೊಂದು ಥರದ ಅತೃಪ್ತಿ ಮತ್ತು ನಮ್ಮೆಲ್ಲರ ಬಗೆಗಿನ ಭಯ ಮಾಲಿಂಗಿಯನ್ನು ಈ ಘಟ್ಟಕ್ಕೆ ತರಲು ಕಾರಣವೂ ಆಗಿದ್ದಿರಬೇಕು. ಈ ಹುಂಬರ ಹಾವಭಾವವನ್ನು ತಿಳಿದವಳು ಆ ಮುಂಚೆಯೇ ಏನಾದರೊಂದು ಏರ್ಪಾಟು ಮಾಡದೆ ಅಥವಾ ಗಂಡನಿಗೆ ತಿಳಿಸದೆ ಹೋದದ್ದು ಅವಳ ಸ್ವಯಂಕೃತ ಅಪರಾಧವೇ ಅನಿಸುತ್ತದೆ.

ಮಾಲಿಂಗಿಯ ಮೇಲೆ, ಉಜಯನಿಯ ಮೇಲೆ ಒಂದು ಬಗೆಯ ಜಿಗುಪ್ಸೆ. ಸಿಟ್ಟು ಬರುವುದಲ್ಲದೆ ಇಂತ ಪ್ರಕರವಾದ ಜಾಲವನ್ನೇ ತಣ್ಣಗೆ ಮಾಡಿ ಕುಂಡರಿಸಿದ ಯಜಮಾನರ ಹಿಕಮತ್ತಿಗೂ ರೋಸಿಹೋಗುತ್ತದೆ. ಈ ಕೃತ್ಯಕ್ಕೆ ಅವಳಾಗಲೀ ಅವ ನಾಗಲೀ ಅಳುವುದ ಬಿಟ್ಟು ಪ್ರತಿಭಟಿಸಿದ ಅಥವಾ ಯಜಮಾನರು ಇಂಥ ಪ್ರಕರಣ ಕ್ಕಾಗಿ ಸಂಬಂಧಿತರನ್ನು ತರಾಟೆಗೆ ತೆಗೆದುಕೊಳ್ಳದ ನಿಷ್ಕ್ರಿಯತ್ವವೇ ಕಾಡುತ್ತದೆ.

ಯಾವ ರೀತಿಯಿಂದ ಇವರು ಪ್ರತಿಕ್ರಿಯಿಸುವ ಗುಣ ರೂಢಿಸಿ–ಕೊಳ್ಳುತ್ತಾರೆ ? ಮಾಲಿಂಗಿ ಮುಸುಮುಸು ಅಳುತ್ತ ಮೂಲೆ ಹಿಡಿದಿರುವುದು, ಉಜನಿ ಸೂತಕದ ಮೈ ಹೊತ್ತು ಜೋಲು ಮೋರೆ ಬಿಟ್ಟು ತಿರುಗುವುದು........

ಪುಟ್ಟರಾಜ ನನ್ನ ನಿವಾಳಿಸಿ ಎಸೆದಂತೆ ಮಾಡಿ ಅತ್ತ ಹೋದಮೇಲೆ ಅಷ್ಟೇ ಉದ್ವೇಗದಿಂದ ಜಗುಲಿಯಿಂದೆದ್ದು ಹೊರಟಿದ್ದೆ. ನನ್ನೊಳಗೆ ಕಾವು ಏರಿದಂತೆ ನನ್ನ ತೂಕಪೂ ತಪ್ಪತೊಡಗಿತ್ತು. ಮುಂದೇನು ಮಾಡಬೇಕು ? ಬಿಡಬಾರದು— ಅನಿಸಿದಂತೆಲ್ಲ ಅವರ ಪಾಪದ ಹೊರೆ ನನ್ನ ಮುಂದೆ ದಟ್ಟವಾಗಿ ಬೆಳೆಯುತ್ತಲೇ ಹೋಗತೊಡಗಿತು. ಅದಕ್ಕೆ ಉತ್ತರ ಹೊಳೆಯುತ್ತಿಲ್ಲವಾದ್ದರಿಂದ ಉಸಿರುಕಟ್ಟಿದಂತೆ ಆಗತೊಡಗಿದೆ. ಬಿಸಿಲಿನ ಝಳ ಮೈ ಉರಿಯನ್ನೂ ಹೆಚ್ಚಿಸಿತು. ನಡೆದೆ.

ಕೆರೆಯ ಏರಿ ಹತ್ತಿ ತೂಬಿನ ಹತ್ತಿರಕ್ಕೆ ಇಳಿದು ಮುಖಕ್ಕೆ ಕೊರಳಸುತ್ತ, ಎದೆಗೆ ಒಂದೇ ಸಮನೆ ನೀರು ಎರಚುತ್ತ ಕೂತೆ.

ಬೇಸಿಗೆಯಲ್ಲೂ ನೀರು ಹೆಚ್ಚು ಸೀದಿರಲಿಲ್ಲ. ಕೆರೆಗೆ ಹೊಸದಾಗಿ 'ಮಟ್ಟ' ಹಾಕಿಸಿದ ರಂತೆ. ಈ ಊರಿನವರು ಕಂತ್ರಾಟು ವಹಿಸ್ಕೊಳ್ಳಾಕೆ ಕಿತ್ತಾಡಿ ಚಿಕ್ಕನಾಯ್ಕನ ಹಳ್ಳಿ ಕರಿಯಪ್ಪನಿಗೆ ಒಪ್ಪಿಸಿ ನಮ್ಮ ಅಜ್ಜದೀರ ಕಾಲದಿಂದ್ಲೂ ಇಲ್ಲದ್ದು ಬ್ಯಾಡ ಬುಡು ಅಂತ ಹೇಳ್ಕೊಂಡು ತೆಪ್ಪಗಾದವಂತೆ. ಅವನು ಸಖತ್ತಾಗಿ ನುಂಕೊಂಡು ಹೋದನಂತೆ. ಹೊತ್ತಾರೆ ಬಿಟ್ಟು ಕೋಳಿಹುಂಜನಂತೋರು ಇವರು. ಊರಿನೋರ ಊರಿ ನೋರೇ ಕೆಡಿಸಿಕ್ಕೆ ಮಾತ್ರ ಗುಡಾಳಾಗಿ ಮುಂದೆ ಬರ್ತಾರೆ....ಮತ್ತಷ್ಟು ಜೋರಾಗಿ ಮುಖಕ್ಕೆ ನೀರೆರೆಚಿಕೊಂಡು ತಲೆಗಷ್ಟು ತಟ್ಟಿಕೊಂಡು ಇಡೀ ಊರಿನವರ ಬಗ್ಗೆಯೇ ಮೂಡಿದ ಸಿಟ್ಟಿಗೆ ಸಾಧನ ಹುಡುಕಲೆತ್ನಿಸಿದೆ. ಕೆರೆಯ ಕೋಡಿ ಬಾಯಲ್ಲಿ ಗೌಡರ ದಾಕ್ಷಾಹಿಣಿ ಬಟ್ಟೆ ಒಗೆಯುತ್ತ ಇತ್ತಲೇ ನೋಡುವಂತೆ ಮಾಡುತ್ತ ಬಟ್ಟೆ ಹೊಗೆಯು ವಂತೆ ಆಡುತ್ತ ಮಾಡುತ್ತಿದ್ದ ಕ್ರಿಯೆ ನನ್ನ ಸೆಳೆಯಿತು. ನಾನು ನೋಡಿದೆ, ನೋಡಿದೆ....ನನ್ನ ನೋಟ ಅವಳಿಗೆ ಉತ್ತೇಜಕವಾಗಿರಬೇಕು....

ನಾನು ಊರಿಗೆ ಅಪರೂಪಕ್ಕೆ ಬರುತ್ತಿದ್ದಾಗ ಹೆಚ್ಚು ಆಸ್ಥೆವಹಿಸುತ್ತ ಸಮಯ ಸಿಕ್ಕಾಗ ಗಮನಿಸುವಂತೆ ಮಾಡುತ್ತಿದ್ದವಳು ಇವಳು. ನನ್ನಂಥ ಹುಡುಗರು ಪ್ರಯತ್ನಿಸಿದರೆ ಸೋಲುವ ದೌರ್ಬಲ್ಯ ಅವಳಲ್ಲಿತ್ತು. ಅವಳೊಂದು ರೀತಿ ಮುಂದುವರಿದ ಜಾತಿ. ಅಂದರೆ ಬೇಕೆನಿಸಿದ್ದನ್ನು ಪಡೆದು ಅಷ್ಟೇ ಬೇಗ ಮರೆತುಬಿಡುವ ವರ್ಗಕ್ಕೆ ಸೇರಿದವಳು. ನನ್ನ ತಂಗಿಯಂಥ ಸುಖ ಪಡಲೂ ಆಗದೆ ಸುಮ್ಮನಿರಲೂ ಆಗದೆ ಒಳಗೊಳಗೇ ಕ್ಷೀಣಿಸುವ ಎರಡನೇ ವರ್ಗಕ್ಕೆ ಸೇರಿದವಳಲ್ಲ. ನಾನೀಗೆದ್ದು ಅತ್ತಲೇ ಹೆಜ್ಜೆ ಹಾಕಿದೆ ; ತೀರ ಬಿಗಿಯಾಗಿ. ಇದನ್ನು ನಿರೀಕ್ಷಿಸಿದವಳಂತೆ ಮುಖ ಕೆಂಪಗೆ ಮಾಡಿಕೊಂಡು ಇಲ್ಲದ ನಾಚಿಕೆ ತಂದುಕೊಂಡಳು. ಮತ್ತು ಒಗೆಯುತ್ತಿದ್ದ ಬಟ್ಟೆಯನ್ನು ಎತ್ತೆತ್ತಲೋ ಬಡಿಯುತ್ತ ಮಿಲುಗುಟ್ಟಿದಂತೆ ಆಡತೊಡಗಿದಳು. ನನಗದು ಅಸಹ್ಯವಾಗಿ ಕಂಡಿತು. ಅವಳ ಕಾಮದ ಉರಿ ಆ ಬಿಸಿಲಿಗೆ ಹತ್ತಿಕೊಂಡಂತೆಯೂ ಕಂಡಿತು. ಒಂದು ವೇಳೆ ನನ್ನ ತಂಗಿಯೂ ಹಿಂಗೇ ಆಡಿದ್ದರೆ....? ಈ ಜನದ ನಡುವೆ ಅವಳು ಇಷ್ಟೊತ್ತಿಗೆ ಮೂರಾಬಟ್ಟೆಯಾಗಿ ಹೋಗುತ್ತಿದ್ದಳು....

ಗಂಭೀರವಾಗಿ ಅವಳ ಸಮೀಪಿಸಿದೆ. ಸಿಟ್ಟು ನನ್ನ ಗೆದ್ದಿತ್ತು ಮತ್ತು ಉಪಾಯವನ್ನೂ ತೋರಿಸುವಂತೆ ಕರೆದಿತ್ತು. ಅವಳು ನನ್ನ ಈ ಬಗೆಯ ಗಂಭೀರ ಮುಖ ನೋಡಿದ್ದರಿಂದಿರಬೇಕು ಅಂಜಿದಳು. ಈಗ ನಾನೇ ಮುಂದಾಗಿ "ನಿನ್ನ ಜನ ನನ್ನ ತಂಗಿ ಕೆಡಿಸಿದೋರ್ನ ಒಳಹಾಕೊಂಡು ಸುಮ್ಮನಾದ್ರು ಈಗ ನಿನ್ಜೊತೆ ನಾನು ಸರಸ ಆಡಿದ್ರೆ ಅದೇ ಜನ ನನ್ನ ಸುಮ್ನೆ ಬುಡ್ತಾರಾ ?" ಅಂದೆ. ರೋಷ ಮಾತಿನ ನಾಟಕೀಯತೆಗೇನು ಒತ್ತುಕೊಡಲಿಲ್ಲ. ಆದರೆ ಆ ಮಾತಿನ ಅರ್ಥ ಅವಳಿಗೆ ಎಷ್ಟು ಗೊತ್ತಾಯ್ತೊ ಇಲ್ವೊ ಕ್ಷಣಾರ್ಧದಲ್ಲಿ ಅವಳ ಭಾವ ಬಿಂಕ ಎಲ್ಲ ಬದಲಾಗಿ ವಿಚಿತ್ರವಾಗಿ ಬಿಳಿಚಿಕೊಳ್ಳತೊಡಗಿದಳು. ಹಂಗಾಗುತ್ತಿದ್ದವಳನ್ನು ಕಂಡು ಮತ್ತೆ 'ಅಂ' ಅಂದೆ ಗಟ್ಟಿಯಾಗಿ. ಈಗವಳು ಹಿಂದುಮುಂದು ನೋಡದೆ ಬಿದ್ದಂಬೀಳ ಓಡತೊಡಗಿದಳು. ಹೆಚ್ಚಂದರೆ ಒರಟಾಗಿ ಉತ್ತರಿಸಿಯಾಳು ಅಥವಾ ಬೈದಾಳು, ಎಂದಷ್ಟೇ ಊಹಿಸಿದ್ದೆ, ಆದರೆ ನನ್ನ ಊಹೆ ತಲೆಕೆಳಕಾಗಿ ಅನಿರೀಕ್ಷಿತವಾದ ಸವಾಲಿಗೆ ದೊಡ್ಡ ಸರಕಾಗಿತ್ತು. ಮುಳ್ಳು ಬಿಡಿಸಿಕೊಳ್ಳಲು ಹೋಗಿ ಮೈ ಕಿತ್ತುಕೊಂಡಂತಾಗಿದ್ದರೂ ಈಗಲಾದರೂ ನ್ಯಾಯದ ಮುಂದೆ ನನ್ನ ಸಮೇತ ಎಲ್ಲರೂ ನಿಲ್ಲಬಹುದಾದ ಚಿತ್ರ ಕಣ್ಣು ಮುಂದೆ ಮೂಡಿ ಆ ಪರಿಸ್ಥಿತಿಯಲ್ಲೂ ವಿಚಿತ್ರ ಖುಷಿ ಅನಿಸಿತು. ಅದಕ್ಕೆ ಅಣಿಯಾಗಬೇಕಾದ ಸಿದ್ಧತೆ ನನ್ನ ಜಾಗ್ರತಗೊಳಿಸಿತು. ಈಗ ಭಾರ ಹೊತ್ತವನಂತಿದ್ದರೂ ಒಂದು ರೀತಿ ದೃಢವಾಗಿ ಮನೆಯತ್ತ ಹೊರಟೆ.

ಕಾಡಿ ಬೇಡಿ ಸಂಜೆ ಹೊತ್ತಿಗೆ ಮಾಲಿಂಗಿಯನ್ನು ಸಿದ್ಧ ಮಾಡಿಕೊಂಡೆ. ಅಷ್ಟರಲ್ಲಾಗಲೇ ಗೌಡರ ಕಡೆಯಿಂದ ಆ ಶಂಕ್ರಿಯ ಸಮೇತ ಹತ್ತಾರು ಕೈಗಳು ಹತ್ತಾರ ಜೋಡಿಸಿಕೊಂಡು ಸಿದ್ಧವಾಗಿದ್ದವೆಂದು ತಿಳಿಯಿತು. ಆದರೆ ರುದ್ರಾಚಾರಿಯೇ ಗೌಡರಿಗೆ ಸಮಾಧಾನ ಹೇಳಿ ತಮ್ಮ ಬಣ್ಣ ತಾವೇ ಬಯಲು ಮಾಡಿಕೊಳ್ಳೋದು ಬೇಡ ಅವನಿಗೆ ಗುಟ್ಟಿನಲ್ಲಿ ಬಲಿ ಹಾಕಿ ನಮ್ಮೂರಿನಿಂದ ಆಚೆ ಅಟ್ಟಬೇಕೆಂದು ಹೇಳಿದನಂತೆ. ಅದು ನನ್ನ ಯೋಜನೆಯನ್ನು ತಲೆಕೆಳಗು ಮಾಡಬಹುದಂತೆನಿಸಿತು, ನ್ಯಾಯಕ್ಕೆ ಸೇರಿಸುವುದೇ ನನ್ನ ಸವುರು ತಂತ್ರವಾಗಿತ್ತು. ಹೇಗಾದರೂ ಇರಲಿಯೆಂದು ಮಾಲಿಂಗಿಯ ಪ್ರಕರಣಕ್ಕೆ ಆ ಸಹಾನುಭೂತಿ ತೋರಿಸಿದ್ದ ಸಣ್ಣಣ್ಣ ಅಜ್ಜಪ್ಪ ಅವರಿಗೆಲ್ಲ ನಾನಾಗೇ ಹೋಗಿ ತಿಳಿಸಿದೆ. ಮತ್ತು ಮುಂದಿನ ಘಟನೆಗೆ ಸಿದ್ಧವಾಗುತ್ತ ಗುಂಡಿಗೆ ಗಟ್ಟಿಮಾಡಿಕೊಂಡೆ.

ನಾನು ಅನುಮಾನಿಸಿದ್ದು ನಿಜವೇ ಆಯಿತು. ಆ ಸುದ್ದಿ ಹಬ್ಬಲು ಹೆಚ್ಚು ಹೊತ್ತು ಬೇಕಾಗಲಿಲ್ಲ. ಅಂತಿಮವಾಗಿ ದೊಡ್ಡ ನ್ಯಾಯವೇ ಸೇರಿತು. ನ್ಯಾಯಕ್ಕೆ ಬಾರಿ ಕಾವು ಕೊಡಲ್ಪಟ್ಟಿತ್ತು. ನನ್ನಲ್ಲಿ ಕುದಿಯುತ್ತಿದ್ದ ಅಂಜಿಕೆಗಿಂತಲೂ ಗಿಂತಲೂ ಈ ಅನಿರೀಕ್ಷಿತ ತಿರುವು ನನಗೆ ನನ್ನಲ್ಲಿಲ್ಲದ ವಿಚಿತ್ರ ಮೊಂಡುತನ ಬೆಳೆಸಿಬಿಟ್ಟಿತ್ತು. ಅವರ ಕರ್ಕಶವಾದ ಮಾತುಗಳಿಗೆ ನಾನು ಶಾಂತವಾಗಿ ಉತ್ತರಿಸಿ "ನಾನು ತಪ್ಪು ಮಾಡಿದ್ದರೆ ನಿಮಗನಿಸಿದಂತೆ ಶಿಕ್ಷೆ ವಿಧಿಸಿರಿ. ಆದರೆ ಇತ್ಯರ್ಥವಾಗಬೇಕಾದ ವಿಷಯವೊಂದಿದೆ" ಎಂದು ಮಾಲಿಂಗಿಯ ಕರೆದು "ನಿರ್ಭಯವಾಗಿ ನಿನ್ನ ಕೆಡಿಸಲು ಬಂದಿದ್ದವರು ಯಾರು ಅಂತ ನ್ಯಾಯಕ್ಕೆ ದೂರು ಕೊಡಮ್ಮ" ಎಂದು ಕಠಿಣವಾಗಿ ಹೇಳಿದೆ. ಅವಳು ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಸುತ್ತ ಜೀವವನ್ನು ಹಿಡಿ ಮಾಡಿಕೊಂಡು ಶಂಕ್ರಿಯಂಕನ ಹೆಸರು ಹೇಳಿದಳು.

ಅವಳನ್ನು ವಾಪಸು ಕಳಿಸಿ. "ಈಗ ಶಂಕ್ರಿ ನನಗಿಂತಲೂ ಅನ್ಯಾಯದ ಕೆಲಸ ಮಾಡಿದ್ದಾನೆ. ಅದಕ್ಕೆ ಅನೇಕ ಜನ ನೆರವಾಗಿದ್ದಾರೆ. ಅವರಿಗೆ ಮೊದ್ಲು ಏನು ಶಿಕ್ಷೆ ಕೊಡ್ತೀರೋ ಅದರ ಮೇಲೆ ನನ್ನ ಶಿಕ್ಷೆ ನಿರ್ಧರಿಸಿ. ಆಗ ನೀವು ಹೇಳಿದ್ದಕ್ಕೆ ನಾನು ತಲೆ ಬಾಗ್ತೀನೆ" ಸೆಟೆದು ಹೇಳಿದೆ. ನಾನು ಬಚಾವು ಆಗಬೇಕೆಂದು ತತ್ಕಾಲದಲ್ಲಿ ಹೊಳೆದ ಯೋಚನೆ ಇಡೀ ಪ್ರಕರಣವನ್ನೇ ತಿರುವು ಮುರುವು ಮಾಡಿತು. ಈ ಪಟ್ಟು ಅವರನ್ನಿಷ್ಟು ಕಟ್ಟಿ ಉರುಳಿಸಬಹುದೆಂದು ಊಹಿಸಿರಲಿಲ್ಲ. ಇದೊಂದೇ ಮಾಲಿಂಗಿಯ ಅನ್ಯಾಯಕ್ಕೆ ಸರಿಯಾದ ಉತ್ತರ ನೀಡುವ ಮಾರ್ಗವೆಂಬುದು ಖಚಿತವಾಗಿ ಕಂಡ ಮೇಲೆ ಅದನ್ನೇ ಪಟ್ಟು ಹಿಡಿದೆ.

ಆಗ ಕೆಲವು ಜನ ಪ್ರಬಲವಾಗಿ ನನ್ನದು 'ಹಾತಾಪಳಿ' ಮಾತೆಂದು ಕೂಗಾಡಿದರು. ಆದರೆ ಅದಕ್ಕಿಂತಲೂ ಹೆಚ್ಚು ಜನ ನನ್ನ ಮಾತೇ ಅಪ್ಪಂತ ಮಾತೆಂದು ಪ್ರತಿಭಟಿಸಿದರು. ನನಗೀಗ ಸಂಪೂರ್ಣ ಬಲ ಬಂದಂತಾಯಿತು.

ನನ್ನ ಪಟ್ಟು ಮತ್ತು ದಿಢೀರ್ ದೊಡ್ಡ ಗುಂಪೊಂದರ ಸಪೋರ್ಟು ನ್ಯಾಯದವರಿಗೆ ದಂಗುಬಡಿಸಿರಬೇಕು. ಅದುವರೆಗೂ ನನ್ನನ್ನೂ ತಮ್ಮೂರಿನವನಂತೇ ಕಾಣುತ್ತಿದ್ದವರಿಗೆ ಮೊದಲ ಬಾರಿಗೆ ನಾನೊಬ್ಬ ಪರಕೀಯ—ಅಂತಹವನು ನಮ್ಮೂರ ಜನವನ್ನೇ ಎತ್ತಿಕಟ್ಟಿರುವನೆಂಬುದು ಎದ್ದುಕಂಡು ಯದ್ವಾತದ್ವ ಅವರನ್ನು ಕಾಡಿರಬೇಕು. ಅದನ್ನೇ ಕೆಲವರು ಅಂದೂ ತೀರಿಸಿಕೊಂಡರು. ಗೌಡರು ಮಾತ್ರ ಇದನ್ನೆಲ್ಲ ಸಹಿಸಲಾಗದೆ "ನಿನಗೆಂತ ನ್ಯಾಯ ಕೊಡಬೇಕೊ ಬೇವರ್ಸಿ ನನ್ಮಗನೆ ? ಎಲ್ಲ ಹಾಳೇನ್ಲ ನೀನು ನನ್ನೂರೋರ್ನೆಲ್ಲ ಗುಂಪು ಕಟ್ಟೋಕ್ಕೆ ? ಏನೋ ಒಂಚೂರು ಓದ್ದೋನು ಅಂತ ಇತ್ತತ್ತ ಬಾ ಅಂತಿದ್ದೆ ಇಷ್ಟು ತಲೆ ತಿರುಗಿ ಬುಡುತ್ಲಾ ನಿಂಗೆ" ಎಂದು ಆವೇಶದಿಂದಲೇ ಎದ್ದುಬಂದು ನನ್ನ ತಲೆಯ ಮೇಲೆ ಬಡಿಯುವಷ್ಟರಲ್ಲಿ ಮೂರ್ನಾಲ್ಕು ಜನ ಅವರ ಹಿಡಿದುಕೊಂಡು ಹಿಂದೆ ಸರಿಸಿದರು. ಈ ಅವಕಾಶದ ಉಪಯೋಗ ಪಡೆದುಕೊಳ್ಳಲು ಬಂದಂತಿದ್ದ ಕೆಲವರು ಕೈ ಬಾಯಿ ಮುಂದು ಮಾಡಿದ್ದು ಕಂಡು ಹುಶಾರಾದ ಯಜಮಾನರು ಎಲ್ಲರನ್ನೂ ತಡೆದು ಸಮಾಧಾನ ಮಾಡತೊಡಗಿದರು.

ನಾನೀಗ ಸಿಕ್ಕಿ ಬಲದಿಂದ ಅವಕಾಶದ ಪೂರ್ಣ ಪ್ರಯೋಜನ ಪಡೆಯಲುಸಿದ್ದನಾಗಿದ್ದೆ. ಗೌಡರ ಪುರುಷತನವೂ ನನ್ನ ಕೆರಳಿಸಿತ್ತು, ಅನ್ನತೊಡಗಿದೆ. ಅದಕ್ಕಿಂತಲೂ ಹೆಚ್ಚಾಗಿ ಕೃತಿ ರೂಪಕ್ಕೆ ತೋರಿಸಿದ್ದು ನನಗೆ ರೆಕ್ಕೆ ಮೂಡಿಸಿತ್ತು. ನ್ಯಾಯ ಚರ್ಚೆ ಆಗದೆಯೇ ಸ್ಫೋಟಗೊಳ್ಳತೊಡಗುತ್ತಿದ್ದ ಕಂಡ ಕೆಲವರು, ಗೌಡರು ಮತ್ತವರ ಕಡೆಯವರನ್ನು ಅತ್ತ ಎಳೆದುಕೊಂಡು ಹೋಗಿ ಏನೇನೋ ಹೇಳಿ ಬಿಡದೆ ಮನೆಯತ್ತ ಸಾಗಿಸತೊಡಗಿದರು. ಮತ್ತೆ ನ್ಯಾಯ ಊಹೆಯನ್ನು ಮೀರಿ ತಂತಾನೆ ಅಂತ್ಯವಾಗತೊಡಗಿತು. ಈಗ ಸೋತ ಸೊಲ್ಲಿಗಿಂತ ಗೆದ್ದ ಸೊಲ್ಲೇ ನನ್ನ ಸುತ್ತ ಆವರಿಸತೊಡಗಿತು, ನನಗೆ ಗೌಡಸಂದ ಮಾತು ಆಳಕ್ಕೆ ಚುಚ್ಚಿದಂತಾಗಿತ್ತು. ನಾನು ಆವೇಶದಿಂದ ಮತ್ತು ಗೌಡರು ಅವರ ಕಡೆಯುವರ ಒತ್ತಾಯಕ್ಕೆ ಮಣಿದು ಅತ್ತ ನಡೆದುದರಿಂದ ಹೆಮ್ಮೆಯಿಂದ ಮಾತಾಡತೊಡಗಿದೆ. ಒಗ್ಗಟ್ಟಿನ ಕೊರತೆಯಿಂದಾಗಬಹುದಾದ ಅನಾಹುತವನ್ನು ನನ್ನ ಸುತ್ತ ನೆರೆದವರ ಗಮನಕ್ಕೆ ತರುತ್ತ ಅವರ ಮನಸ್ಸಿಗೆ ನಾಟುವಂತೆ ಮಾತಾಡಿದೆ. ಕೆಲವರಂತು ನನ್ನ ಮಾತನ್ನೇ ಹೀರುವಂತೆ ಕೇಳಿದರು. ಹೌದೌದೆಂದು ತಲೆ ಆಡಿಸಿದರು.

ಈ ಪೂರಿನ ಇತಿಹಾಸದಲ್ಲಿ ದಾಖಿಲಾಗಬೇಕಾದ ಘಟನೆಯ ಸಾಧನೆಗೆ ತುಂಬಾ ಹೆಮ್ಮೆಗೊಂಡು ಮಾರನೆಯ ಬೆಳಗನ್ನು ಬಹು ಉತ್ಸಾಹದಿಂದಲೇ ಸ್ವಾಗತಿಸಿದೆ. ಆದರೂ ಅಷ್ಟು ಜನವೆಲ್ಲ ಒಟ್ಟಾಗಿ ನನ್ನ ಮಾತಿಗೆ ಸೈಪಟ್ಟಿದ್ದನ್ನು ತಿಳಿಯುವ ಕುತೂಹಲವಿತ್ತು. ಬೆಳಿಗ್ಗೆಯೇ ಮನೆಯತ್ತ ಬಂದ ಸಣ್ಣಣ್ಣ ರಾತ್ರಿಯ ನ್ಯಾಯವನ್ನೇ ಹೆಮ್ಮೆಯಿಂದ ವರ್ಣಿಸತೊಡಗಿದಾಗ "ಅಷ್ಟು ಹಾರಾಡ್ತಿದ್ದೋರು ಯಾಕಂಗೆ ಬುಳ ಬುಳನೆ ಹೊಂಟುಬುಟ್ಟರಲ್ಲ ಸಣ್ಣಣ್ಣ? ಅದಂತು ಬಲೆ ಸೋಜಿಗವಪ್ಪ" ಅಂತ ನನ್ನ ಅನುಮಾನವನ್ನು ಅವನ ಮುಂದಿಟ್ಟೆ.

"ಅಯ್ ಅದ್ಯಾಕ್ ಮಗ ಹಂಗಂತಿ. ನಿಂಗೆ ಗೊತ್ತಿಲ್ವ? ನೀವೂ ನಾವೂ ಒಂದಾದ್ರೆ ಸಂಖ್ಯೆಲೇನು ಕಮ್ಮೀಯಿವಿ? ನಿನ್ನ ತಂಗಿ ಮಾನ ಹೋದದ್ದು ಒಂದೇ ನನ್ನ ಮಗಳ ಮಾನ ಹೋದದ್ದು ಒಂದೇ ಅಲ್ವಾ? ಅಷ್ಟೆ ಯಾಕೆ ಅವರ ಜಾತಿಯ ನಿಂಗರಾಜಪ್ಪ, ಮಲ್ಲಯ್ಯ ಎಲ್ಲ ಅವರ ಬುಡಬ್ಯಾಡಿ ನಾವ್ ಹಿಂದಿರ್ತೀವಿ ಅವರಿಗೆ ಸರಿಯಾಗಿ ಬುದ್ಧಿ ಕಲ್ಸಿ ಅಂತ ನಮ್ಗೆ ಸಪೋಟು ಮಾಡಿದ್ರು ಅಂತೀನಿ! ಒಟ್ನಾಗೆ ಇಂಥಾದೊಂದು ಸಂಧಿ ಕಾಯ್ತಿದ್ದೊ ನೋಡು. ಅವರೇನಾದ್ರೂ ತರ್ಲೆ ತೆಗದಿದ್ದ ಬುಡುತ್ತಿದ್ವಾ ನಮ್ಮ ಹೈಕ್ಳು ಸಿದ್ಧವಾಗೇ ಬಂದಿದ್ರೊ, ಅದ ಕಂಡೇ ಹಾತೇ ಹುಳಿಗೆ ಶಾಟ ಬಂದಂಗೆ ನಿನ್ನೆ ಮೊನ್ನೆ ಹುಟ್ಕೊಂಡು ಆಡೊ ಆ ಯಜಮಾನ್ರುಗೊಳು ಹಂಗೆ ಅವರ್ನೆಲ್ಲ ಅಲ್ಕೊಂಡು ಹೋಗಿದ್ದು, ಮತ್ತೆ....ವರ್ಣಿಸುವ ಕಲೆ ಒಂದು ಕಾಲದಲ್ಲಿ ತಾನೂ ಯಜಮಾನ ಅಂತ ಮೆರೆದಿದ್ದ ಸಣ್ಣಣ್ಣನಿಗೆ ದಕ್ಕಿತ್ತು.

ನಾನು ಸಣ್ಣಣ್ಣನ ಮುಖವನ್ನೇ ಮಿಕಿಮಿಕಿ ನೋಡುತ್ತಿದ್ದೆ. ಗುತ್ತಿ ಗುತ್ತಿ ಯಾಕಾರದಲ್ಲಿ ಬೆಳೆದು ನೆರೆತ ಮೀಸೆ ಕೊಬ್ಬಿನಲ್ಲಿ ನಿಂತಿದ್ದವು. ಸುಕ್ಕುಗಟ್ಟಿದ ಮುಖ ಅಲ್ಲಿ ವಿಜಯದ ಅಲೆ ಚಿಮ್ಮುತ್ತಲೇ ಇತ್ತು. ಅನ್ಯಾಯಕ್ಕೆ ಎತ್ತಿದ ಪ್ರತಿಭಟನೆಯ ದಿಟ್ಟತನವೇನಾದರೂ ಇದೆಗಿದೆಯೋ ಎಂದು ಈ ಗೂಟದಂಥ ಮೀಸೆಯೊಳಗಿಂದ ಹುಡುಕುವ ವ್ಯರ್ಥಪ್ರಯತ್ನವನ್ನು ಮಾಡಿದೆ. ಮತ್ತೆ ಸಣ್ಣಣ್ಣ "ಅದ್ಯಾಕ್ ಮಗ ಹಂಗೆ ಕೂತೆ" ಅಂದ. ನಾನು ಆ ಹೂ ಅನ್ನಲಿಲ್ಲ. ಇನ್ನೂ ಏನೇನೋ ಹೇಳುವ ತರಾತುರಿಯಲ್ಲಿ ಇದ್ದಂತೆ ಕಾಣುತ್ತಿದ್ದ ಅವನು.



# ರಾಜಕೀಯ ಸಂನ್ಯಾಸಿಗಳು ಮತ್ತು ಅವರ ಚೇಲಾಗಳು

—ನೀರದ್ ಚೌದರಿ

ನನ್ನ ಹಿಂದಿನ ಎರಡು ಬರಹಗಳಲ್ಲಿ ವೈದೃಶ್ಯವು ಧ್ವನಿತವಾಗಿದೆಯೆಂದು ಓದುಗರಿಗನ್ನಸಿದ್ದು ನನಗೆ ಆಶ್ಚರ್ಯವನ್ನುಂಟುಮಾಡಿದೆ ; ಆಂಗ್ಲ ಜೀವನದ ವಿನಾಶಕಾರಿ ಮೃಗಮಾನವರನ್ನು ಎರಡನೇ ಬರಹದಲ್ಲಿ ಚಿತ್ರಿಸಲಾಗಿತ್ತು. ಮೊದಲನೆಯದರಲ್ಲಿ ಚಿಲ್ಲರೆ ವ್ಯಾಪಾರಿಗಳ ಪ್ರಾಧಾನ್ಯತೆಯ ವೃದ್ಧಿಯು ಇಂಡಿಯಾಕ್ಕೆ ವಿನಾಶಕಾರಿಯಾಗಿದೆಯೆಂದು ಸೂಚಿಸಲಾಗಿತ್ತು. 'ಚಿಲ್ಲರೆ ವ್ಯಾಪಾರಿ' ಎಂಬ ಪದ ಬಳಸಿರುವುದು ಪ್ರಾಮಾಣಿಕ ಸಣ್ಣ ವರ್ತಕರಿಗೆ ಅನ್ವಯಿಸದು. ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಕೇವಲ ಹಣಕ್ಕಾಗಿ ಕೆಲಸ ಮಾಡುವ ತುಚ್ಛವ್ಯಕ್ತಿಗಳನ್ನುದ್ದೇಶಿಸಿ ಆ ಪದವನ್ನು ಬಳಸಲಾಗಿದೆ. ನಾನು ನನ್ನ ಮೊದಲ ಬರೆಹದಲ್ಲಿ ಅನುದ್ದೇಶಿತವಾಗಿ, ಇಂಡಿಯಾದ ಬುದ್ಧಿಜೀವಿಗಳು ರಾಜಕೀಯ ಜವಾಬ್ದಾರಿಯನ್ನು ನಿರಾಕರಿಸಿ ಖಾಸಗಿ ಜೀವನದಲ್ಲಿ ನಿಮಗ್ನರಾಗುತ್ತಿರುವರೆಂದು ಪ್ರಸ್ತಾಪಿಸಿರುವುದನ್ನು ನೆನಪಿಸಿಕೊಳ್ಳಬಹುದು. ಇಂಡಿಯಾದ ರಾಜಕೀಯದಲ್ಲಿನ ಗೊಂದಲಕ್ಕೆ ಇದೇ ಮುಖ್ಯ ಕಾರಣವಾಗಿದೆಯೆಂದು ನಾನು ಭಾವಿಸಿ, ನನ್ನ ಆಲೋಚನೆಗಳನ್ನು ಬೆಳೆಸುತ್ತೇನೆ.

ಇಂಡಿಯಾದ ಬುದ್ಧಿಜೀವಿಗಳ ಬಗ್ಗೆ ನಾನು ಏನು ಹೇಳಿದ್ದೆನೊ ಅದು ನಿಜವಾಗಿಯೂ ಒಂದು ಆಪಾದನೆಯಾಗಿತ್ತು. ಆ ಆಪಾದನೆ, ಉನ್ನತ ವರ್ಗದ, ಅಂದರೆ ಶ್ರೇಷ್ಠ ಬುದ್ಧಿಜೀವಿಗಳೂ ವಿದ್ಯಾವಂತರೂ ಮತ್ತು ಅದರಲ್ಲಿರುವ ಸಮರ್ಥ ಶಕ್ತಿಶಾಲಿಗಳೂ ಲೌಕಿಕ ಯಶಸ್ಸುಗಳಿಸುವ ಪ್ರಯತ್ನವನ್ನು, ಹಣದ ಅಥವಾ ಅಧಿಕಾರದ ಸ್ವರೂಪದಲ್ಲಿರುವುದನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟ ರಾಜಕೀಯಕ್ಕೆ ತಮ್ಮನ್ನು ಸ್ವಾರ್ಥ ಹಿತವಿಲ್ಲದೆ, ಆಧ್ಯಾತ್ಮಮಾರ್ಗದ ಸಂತರ ರೀತಿಯಲ್ಲಿ ಅರ್ಪಿಸಿಕೊಳ್ಳಬೇಕೆಂದು ಅರ್ಥ ಬರುವಂತೆ ಹೇಳಿದ್ದಾಗಿರಲಿಲ್ಲ. ನಿಜವಾಗಿಯೂ, ಗಾಂಧಿ ರಾಷ್ಟ್ರೀಯ ಆಂದೋಳನದಿಂದ ರಾಜಕೀಯ ಸಂನ್ಯಾಸಿಗಳಿಗೆ ಮತ್ತು ಅವರ ಶಿಷ್ಯರ ಗಂಪಿನ ನಿರ್ಮಾಣಗೊಂಡ ಕ್ರಮವೇ ಸ್ವಾತಂತ್ರ್ಯಾನಂತರದ ವಿಫಲತೆಗೆ ಮೂಲವಾಯಿತೆಂದು ನನಗನ್ನಿಸುತ್ತಿದೆ.

ಆ ರಾಜಕಾರಣದ ಮಾದರಿ ತನ್ನ ಅತ್ಯುತ್ತಮ ಫಲವಾಗಿ ವಿನೋಬಭಾವೆಯನ್ನು ಕೊಟ್ಟಿತು. ದುಷ್ಫಲವಾಗಿ ಮೊರಾರ್ಜಿದೇಸಾಯಿಯನ್ನು ಕೊಟ್ಟಿತು. ಯಾವುದೇ ವಿಧದ ವಿವೇಕಯುಕ್ತ ರಾಜಕಾರಣದಲ್ಲಿ ಇಬ್ಬರೂ ಹಂಚಿ ಹೋಗುವಂಥವರು. ಇಂಡಿಯಾದ ರಾಜಕಾರಣಕ್ಕೆ ನಾಗಾಗಳ ನಡುವಿನ ಸಂಬಂಧ ಉದ್ಭವದಿಂದಾದ ಲಾಭಕ್ಕಿಂತ, ನಾಗಾ ಸಂನಾಸಿಗಳ ಅಸ್ತಿತ್ವದಿಂದ ಹಿಂದೂ ಸಿದ್ಧಾಂತಕ್ಕಾದ ಲಾಭವೇ ಅಧಿಕವಾದದ್ದು. ಎರಡೂ ರೀತಿಯ ನಾಗಾಗಳ ನಡುವಿನ ಸಂಬಂಧ ಮತ್ತು ಅವರು ಅಪ್ಪಿಕೊಂಡಿರುವ ಪಂಥಗಳು ವ್ಯತ್ಯಾಸದಿಂದ ಕೂಡಿದೆ. ನಾಗಾ ಸಂನ್ಯಾಸಿಗಳು ಹಿಂದೂ ಸಿದ್ಧಾಂತದ ಬೆಂಬಲಪಡೆದ ಪರಾವಲಂಬಿಗಳಾದರೆ, ನಾಗಾ ರಾಜಕಾರಣಿಗಳು ಇಂಡಿಯಾದ ರಾಷ್ಟ್ರೀಯತೆಗೆ ಪರಾವಲಂಬಿಗಳಾಗಿದ್ದಾರೆ.

ತ್ಯೋರಿಕೆಯ ಈ ವ್ಯತ್ಯಾಸದಲ್ಲಿ, ಯಾರು ತಮ್ಮ ಬುದ್ಧಿ ಮತ್ತೆ, ವ್ಯಕ್ತಿತ್ವ ಮತ್ತು ವಿದ್ಯೆಯಿಂದ ಜೀವನದಲ್ಲಿ ಯಶಸ್ಸುಗಳಿಸಿದ್ದಾರೋ ಅವರು ದಕ್ಷ ರಾಜಕಾರಣಿ ಸಹ ಆಗ ಬಲ್ಲರೆಂಬುದನ್ನು ನಾನು ಎತ್ತಿ ಹಿಡಿಯುತ್ತೇನೆ. ಸದ್ಯದ ಇಂಡಿಯಾದಲ್ಲಿ ಯಾರಿಗೆ ರಾಜಕೀಯ ವು ವೃತ್ತಿಯಾಗಿದೆಯೋ ಅವರು ಐಹಿಕ ಸಾಫಲ್ಯಕ್ಕಾಗಿ ತಮ್ಮ ಪ್ರತಿಭೆಯನ್ನು ಪ್ರಕಟಿಸಿ ರಾಜಕಾರಣವನ್ನು ಆಶ್ರಯಿಸಿಲ್ಲ. ಆದರೆ ಪುಡಾರಿ ರಾಜಕಾರಣವನ್ನು ನಡೆಸಿ ಅದನ್ನು ಲೌಕಿಕ ಸಾಫಲ್ಯತೆಗೆ ಮೆಟ್ಟಿಲನ್ನಾಗಿಸಿಕೊಂಡಿದ್ದಾರೆ. ಸೇವಾ ಮನೋಭಾವಕ್ಕಿಂತ ಹೆಚ್ಚಾಗಿ ವೈಯಕ್ತಿಕ ಮಹತ್ವಾಂಕ್ಷೆಗಳೂ ಸಹ ವ್ಯಕ್ತಿಗಳನ್ನು ರಾಜಕೀಯ ವೃತ್ತಿಯ ಕಡೆಗೆ ತಿರುಗುಸುತ್ತಿವೆಯೆಂಬುದನ್ನು ಹೇಳಬೇಕಾಗಿಯೇ ಇಲ್ಲ. ವೃತ್ತಿಯಿಂದ ಬಂದ ಸಂಪತ್ತು ಅಥವಾ ವ್ಯಾಪಾರವನ್ನು ಸಾರ್ವಜನಿಕ ಸೇವೆಗೆ ಅರ್ಪಿಸಿದ ಒಬ್ಬಾತನಲ್ಲಿ ಮಹತ್ವಾಕಾಂಕ್ಷೆಗಳಿದ್ದರೆ ಅದು ನಿಂದನಾರ್ಹವೇನೂ ಅಲ್ಲ. ಇಂದು ಇಂಡಿಯಾದಲ್ಲಿ ವೈಯಕ್ತಿಕ ಮಹತ್ವಾಕಾಂಕ್ಷೆಯ ಬುದ್ಧಿ ಜೀವಿಗಳ ಅಭಾವ ವಿರುವುದನ್ನು ನಾನು ವಿಷಾದದಿಂದ ಹೇಳಬೇಕಾಗಿದೆ. ಅದರಿಂದಾಗಿ ಇಂಡಿಯಾದ ರಾಜಕಾರಣವು ಬೇರೆ ನಿರೂಪ ಸಾಮರ್ಥ್ಯವಿಲ್ಲದಿದ್ದರೂ ಕಾಜಕೀಯದಿಂದ ಮಾತ್ರ ದುಡ್ಡು ಮಾಡಬಯಸುವಂಥವರ ಹಿಡಿತಕ್ಕೆ ಸಿಕ್ಕಿಬಿದ್ದಿದೆ.

ರಾಜಕೀಯದಿಂದ ಇಂಡಿಯಾದ ಸೇವೆಮಾಡಬೇಕಾಗಿರುವ ವ್ಯಕ್ತಿಗಳು ಈಗ ಹಣಕ್ಕಾಗಿ ಹಾತೊರೆಯುತ್ತಿದ್ದಾರೆ, ಅದೂ ನಿಂತ ಮಾರ್ಗದಲ್ಲಿ. ಏನನ್ನೂ ಅರ್ಪಿಸದೆ ಹೆಚ್ಚು ಹಣಗಳಿಸಬೇಕೆಂಬ ಅಪೇಕ್ಷೆಯನ್ನು ಅವರು ಹೊಂದಿದ್ದಾರೆ. ಇದರಿಂದಾಗಿ ಭಾರತದ ಒಟ್ಟು ಬುದ್ಧಿಮತ್ತೆಯ ಶ್ರೇಷ್ಠ ಬುದ್ಧಿ ಜೀವಿಗಳು ಮತ್ತು ವಿದ್ಯಾವಂತರು ತಮ್ಮದೇ ಆದ ಒಂದು ಮಾದರಿಯಾಗಿ ಪರಿವರ್ತನೆಗೊಂಡಿದ್ದಾರೆ. ಇಂಥವರ ಬಗ್ಗೆ

ನನಗೆ ಗೌರವವಿಲ್ಲ. ಅವರು ಸಾರ್ವಜನಿಕ ಕ್ಷೇತ್ರದಲ್ಲಿ ಎಷ್ಟು ಸಾಧ್ಯವೋ ಅಷ್ಟು ಭಾಗವಹಿಸಬೇಕಾಗಿರಬಹುದು, ಆಸಕ್ತಿ ಕಳೆಯ ಬೇಕಾಗಿರುವುದು ಸಾಮಾಜಿಕ ಕರ್ತವ್ಯ ವಾಗಿದೆ ಎಂಬುದನ್ನು ಯೋಚಿಸಿದಂತೆ ಕಂಡುಬರುವುದಿಲ್ಲ. ನಾನು ನನ್ನ ಕಾಲೇಜು ದಿನಗಳಲ್ಲಿ ಓದಿದ ಗ್ರೀಕ್ ಇತಿಹಾಸದ ಬೆಳಕಿನಲ್ಲಿ ಇಂಥ ವ್ಯಕ್ತಿಗಳ ಬಗ್ಗೆ ತೀರ್ಮಾನಕ್ಕೆ ಬರಲು ತೊಡಗಿದ್ದೇನೆ. ಪೆರಿಕ್ಲೀಸನ ಮೂಲಕ ಹೊಮ್ಮಿದ ಥುಸಿಡೈಡಸ್‌ನ ಭಾಷಣ ವನ್ನು ನಾನು ಓದಿದ್ದೇನೆ. ಅಲ್ಲಿ ಹೀಗೆ ಹೇಳಲಾಗಿದೆ: ಅಥೇನಿಯನ್ನರಾದ ನಾವು ಯಾರು ರಾಜಕೀಯದಲ್ಲಿ ಆಸಕ್ತಿವಹಿಸುವುದಿಲ್ಲವೋ ಅಂಥ ವ್ಯಕ್ತಿಯನ್ನು ಕೇವಲ ನಿರುಪಯುಕ್ತಕಾರಿಯೆಂದು ಮಾತ್ರವಲ್ಲದೆ ನಿಷ್ಪ್ರಯೋಜಕ ವ್ಯಕ್ತಿಯೆಂದೂ ಪರಿಗಣಿಸುತ್ತೇವೆ.

ಇಂಡಿಯಾದಲ್ಲಿ 1920ರವರೆಗೆ ಹೀಗಿರಲಿಲ್ಲ. ರಾಷ್ಟ್ರೀಯ ಆಂದೋಳನದ ಪ್ರಾರಂಭದಲ್ಲಿಯೇ, 19ನೇ ಶತಮಾನದ ಕೊನೆಗೆ ಆಂದೋಳನದ ನಾಯಕತ್ವವನ್ನು ವಹಿಸಿ, ಅದರ ಸಿದ್ಧಾಂತ ಹಾಗು ಯೋಜನೆಗಳನ್ನು ಸೂತ್ರೀಕರಿಸಿದವರೂ ಚೆನ್ನಾಗಿ ಓದಿದವರೂ ಮತ್ತು ಸಫಲ ಜೀವನವನ್ನು ನಡೆಸಿದ ವ್ಯಕ್ತಿಗಳೂ ಆಗಿದ್ದರು. ಆದಿನ ಗಳಲ್ಲಿ ಭಾರತೀಯರಾರಿಗೂ ದೇಶದ ಸರ್ಕಾರದಲ್ಲಿ ಪಾತ್ರವಹಿಸುವ ಅವಕಾಶಗಳಿರಲಿಲ್ಲ. ಆದರೆ ಆಕಾಲದ ರಾಷ್ಟ್ರೀಯ ನಾಯಕರುಗಳು ರಾಜಕೀಯ ಕರ್ತವ್ಯವೆಂದುರಳಿದ, ಅದರಲ್ಲಿ ಪಾತ್ರವಹಿಸುವುದನ್ನು ಇದು ಯಾವರೀತಿಯಲ್ಲೂ ಪ್ರತಿಬಂಧಿಸಲಾಗಲಿಲ್ಲ. ಅವರು ತಮ್ಮ ವೃತ್ತಿಯನ್ನಾಗಲಿ ಅಥವಾ ವ್ಯಾಪಾರವನ್ನಾಗಲಿ ರಾಜಕಾರಣಿಯಾಗ ಬೇಕೆಂಬ ಮಹತ್ವಾಕಾಂಕ್ಷೆಯಿಂದ ತೊರೆದು ಬಂದವರಾಗಿರಲಿಲ್ಲ.

ನಾನೊಂದು ನಿದರ್ಶನ ಕೊಡುತ್ತೇನೆ. ಒಬ್ಬ ವ್ಯಕ್ತಿ, ಆತ ಹಿರಿಯರಾಜಕಾರಣಿ ಯೇನೂ ಆಗಲಿಲ್ಲ. ಅತ್ಯಧಿಕ ಆದಾಯದ ವೃತ್ತಿಯನ್ನವಲಂಬಿಸಿದ್ದ ಆತ, ಸಾರ್ವಜನಿಕ ಕರ್ತವ್ಯ ನಿರ್ವಹಿಸಬೇಕಾದ ಕರೆ ಬಂದಾಗ ತನ್ನ ವೃತ್ತಿಯನ್ನು ತೊರೆಯಲು ಹಿಂಜರಿಯ ಲಿಲ್ಲ. ಆತನ ಹೆಸರು ಸತ್ಯೇಂದ್ರ ಪ್ರಸನ್ನ ಸಿಂಹ (ಸರ್. ಎಸ್. ಪಿ. ಮತ್ತು ಲಾರ್ಡ್ ಸಿಂಹ ಎಂದು ಪ್ರಸಿದ್ಧರಾಗಿದ್ದಾರೆ). ವೈಸ್‌ರಾಯ್ ಅವರ ಕಾರ್ಯನಿರ್ವಾಹಕ ಮಂಡಳಿಗೆ ಪ್ರಥಮ ಭಾರತೀಯ ಸದಸ್ಯನನ್ನಾಗಿ ಆತನನ್ನು ನೇಮಿಸಲಾಯಿತು. ಕಲ್ಕತ್ತದ ಬ್ಯಾರಿಸ್ಟರನಾಗಿದ್ದ ಅವನ ಆದಾಯ ವೈಸ್‌ರಾಯ್ ಅವರ ಆದಾಯಕ್ಕೆ ಸರಿಸಮನಾಗಿತ್ತು. ಆದರೆ ಆತ ತನ್ನ ಹಿಂದಿನ ಸಂಬಳದ ಕಾಲುಭಾಗದಷ್ಟು ಆದಾ ಯಕ್ಕೆ ಹೊಸ ಹುದ್ದೆಯನ್ನು ಒಪ್ಪಿಕೊಂಡ. ನಿವೃತ್ತನಾದಮೇಲೆ 1915ರ ಮುಂಬೈ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆಯನ್ನು ಆತ ವಹಿಸಿದ್ದ. ಆ ಸಂದರ್ಭದಲ್ಲಿ ಕೆಲವು ಯುವತಿಯರು ಇಂಡಿಯಾದ ವೈಭವ ಮತ್ತು ಧೀರೋದ್ದಾರ ಗುಣಗಳನ್ನು ಹೊಗಳುವ

ದೇಶಭಕ್ತಿ ಗೀತೆಗಳನ್ನು ಹಾಡಿದ್ದನ್ನು ಕೇಳಿ ಆತನ ಕಣ್ಣುಗಳಲ್ಲಿ ನೀರು ಸುರಿಯಿತು. ನಾವಿಂದು ಅಂಥ ವ್ಯಕ್ತಿಗಳ ನೆನಪಿಗೆ ಯಾವ ಗೌರವವನ್ನು ಅರ್ಪಿಸುತ್ತಿಲ್ಲ. ಪ್ರಪಂಚ ದಲ್ಲಿ ಉನ್ನತ ಸ್ಥಾನಮಾನಗಳನ್ನು ಪಡೆದುಕೊಳ್ಳಲು ಸಾಧ್ಯವಿದ್ದ ಅನೇಕ ಜನ, ಪೂನಾದ ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಸದಸ್ಯರಂತೆ, ಸ್ವಯಂಪ್ರೇರಣೆಯಿಂದ ಇಂಡಿಯಾಕ್ಕೆ ಸೇವೆ ಸಲ್ಲಿಸಲು ಎಲ್ಲವನ್ನೂ ತ್ಯಜಿಸಿದವರ ಬಗ್ಗೆ ನಮಗೆಂದು ಗೌರವ ವಿಲ್ಲ.

ವಾಸ್ತವ ಸಂಗತಿಯೆಂದರೆ, 1920ರ ಅನಂತರ ಇಂಡಿಯಾದ ಸಾಮಾಜಿಕ ಮತ್ತು ಬುದ್ಧಿಮತ್ತೆಯ ವಾತಾವರಣದಿಂದ ರಾಜಕೀಯವನ್ನು ಪ್ರವೇಶಿಸಿ ಅವರ ಮುಂಚೂಣಿ ಯಲ್ಲಿ ಸ್ಥಾನ ಪಡೆದವರು ಕೇವಲ ಇಬ್ಬರು ಮಾತ್ರ. ಅವರು ಜವಹರಲಾಲ್‌ನೆಹರು ಮತ್ತು ಸುಭಾಸ್‌ಚಂದ್ರಬೋಸ್. ಆದರೆ ಬೋಸ್ ಗಾಂಧಿ ವಿರೋಧಿಯಾದರು. ಕೊನೆಗೆ ಇಂಡಿಯಾದ ರಾಜಕಾರಣದಿಂದ ಬಹಿಷ್ಕೃತರಾದರು. ತನ್ನ ಸ್ವಂತ ದೃಷ್ಟಿ ಕೋನ ಮತ್ತು ವ್ಯತ್ಯಾಸಗಳನ್ನು ಅದುಮಿಟ್ಟುಕೊಂಡು ನೆಹರು ಒಳಗಡೆ ಉಳಿದರು. ನಿಜಪಾಗಿಯೂ ಗಾಂಧಿ ಅಂದೋಳನದಲ್ಲಿದ್ದ ಹಲಕೆಲವುನಾಯಕರು ಈ ವರ್ಗಕ್ಕೆ ಸೇರಿದವರಾಗಿದ್ದರು. ಆದರೆ ಅವರು ರಾಜಕೀಯದಲ್ಲಿ ಹಿಂದೂಶ್ರಮಜೀವಿ ಸಿದ್ಧಾಂತ ವನ್ನವಲಂಬಿಸುವುದನ್ನು ಮತ್ತು ತಮ್ಮ ವಿಶೇಷ ಆಲೋಚನೆಗಳನ್ನು ಬಿಟ್ಟುಕೊಟ್ಟು ಅಂದೋಳನದಲ್ಲಿ ಉಳಿದುಕೊಂಡರು. ಹೀಗಿದ್ದರೂ 1924ರಲ್ಲಿ ಕೆಲವರು ಗಾಂಧಿ ತತ್ವವನ್ನು ವಿರೋಧಿಸಿ ಸ್ವರಾಜ್ಯ ಪಕ್ಷವನ್ನು ಕಟ್ಟಿದರು. ರಾಷ್ಟ್ರೀಯ ಅಂದೋಳನದಲ್ಲಿ ಪರಿಣಾಮಕಾರಿ ಪಾತ್ರವಹಿಸಬಹುದಾಗಿದ್ದ ಉನ್ನತ ವರ್ಗದವರಿಂದ ರೂಪುಗೊಂಡ ಕೊನೆಯ ರಾಜಕೀಯ ಪಕ್ಷವದಾಗಿತ್ತು. 1930ರ ವೇಳೆಗೆ ಅವರೂ ಸಹ ಬದಿಗೆ ಸರಿದರು.

ಸ್ವಾತಂತ್ರ್ಯನಂತರ ಆ ವರ್ಗದಿಂದ ಒಬ್ಬನೇ ಒಬ್ಬ ರಾಜಕಾರಣಿ ಸಹ ಉದ್ಭವಿಸ ಲಿಲ್ಲ. ಬಹುಶಃ, ಇಂಡಿಯಾದ ರಾಜಕೀಯ ಸ್ವರೂಪ ಆ ವರ್ಗದವರಿಗೆ ಅವಕಾಶ ವನ್ನು ಕಲ್ಪಿಸಿಕೊಡುವಂತಹದ್ದಲ್ಲವೆಂದು ಹೇಳಬಹುದಾಗಿದೆ. ಇಂಡಿಯಾದಲ್ಲಿ ಪರಿ ಣಾಮಕಾರಿ ಮತ್ತು ಪ್ರಜ್ಞಾಪೂರ್ಣ ಸರ್ಕಾರದ ಅಭಾವವಿರುವುದಕ್ಕೆ ಕಾರಣ, ಇಂಡಿಯಾದ ಬುದ್ಧಿಮತ್ತೆಯ ಉನ್ನತವರ್ಗವು ಸಂಕಲ್ಪಬಲವಿಲ್ಲದೆ ರಾಜಕೀಯ ವೃತ್ತಿ ಯನ್ನು ನಿರ್ಲಕ್ಷಿಸಿರುವುದೇ ಆಗಿದೆ. ಅದನ್ನೇ ನಾನು ಆ ವರ್ಗದ ಸ್ವಧರ್ಮ ಪರಿ ತ್ಯಾಗ ಎಂದು ಕರೆದಿದ್ದೇನೆ.

ಅನು : ಕ. ನಂ.

# ಒಳನೋಟ

## ಫೆಡರಲ್ ಪ್ರಶ್ನೆ

ಪ್ರತಿಕ್ರಿಯೆ : ೧

ಸಾಧಾರಣವಾಗಿ ಹೊಸಬಗೆಯ ಚಿಂತನೆಗಳನ್ನು ಬೇರೆಯವರು ಮಂಡಿಸಿದಾಗ ನಮ್ಮ 'ರಾಜಕೀಯ' ಲೇಖಕರು ಒಂದೋ ನಿರ್ಲಕ್ಷಿಸುತ್ತಾರೆ ಅಥವಾ ಕಾಲೆಳೆಯುವ ಮನೋಭಾವ ಪ್ರದರ್ಶಿಸುತ್ತಾರೆ. ಇದಕ್ಕೆ ನಿದರ್ಶನ ನೀಡಿ ಹೊಸಗೊಂದಲ ಸೃಷ್ಟಿಸಲಾರೆ. ಮುಖ್ಯವಾಗಿ ಇಂತಹ ಮನೋದೌರ್ಬಲ್ಯವನ್ನು ನಮ್ಮ ಅನೇಕ ಘೋಷಿತ ಪ್ರಗತಿಶೀಲರು ಪ್ರಕಟಿಸಿದ್ದು ನನಗೆ ಗೊತ್ತು. ಎಸ್. ವೆಂಕಟರಾಂರವರ ಮೂರೂ ಲೇಖನಗಳೂ ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟವಾದದ್ದನ್ನು ಮುಂಚೆಯೇ ನೋಡಿದ್ದೇನೆ. ಮೊದಲೆರಡೂ ಕನ್ನಡಪ್ರಭದಲ್ಲಿ, ಮೂರನೆಯದು 'ಜನತಾ'ದಲ್ಲಿ, ಪ್ರತಿಷ್ಠಿತರು ಆಗ ಇದನ್ನು ಗಮನಿಸಲಿಲ್ಲ. ಈಗ ಗಮನಿಸಬಹುದು.

ನಮ್ಮ ಅನೇಕ ಮಹತ್ವಪೂರ್ಣ ರಾಜಕೀಯ ನಡೆಗಳೂ ದೂರದಲ್ಲೆಲ್ಲೋ ಹೊಳೆಯುತ್ತವೆ. ನಮ್ಮನ್ನೆಲ್ಲ ಒಳಗೆ ತೊಡಿಸಿಕೊಳ್ಳಬೇಕಾದ ಈ ಕ್ರಿಯೆಗಳು ತಾವು ನಮ್ಮ ಸಂಬಂಧಿಕರೆನ್ನುವುದನ್ನು ಎಂದೂ ಸಿದ್ಧ ಪಡಿಸಿಕೊಂಡಿರದ ಯಜಮಾನರುಗಳಿಂದ ಆರಂಭವಾಗುತ್ತವೆ. ಈ ನಡೆಗಳು ಮಹತ್ವಪೂರ್ಣವಾದವು ಯಾಕೆಂದರೆ ಇವು ಗಂಭೀರ ಪರಿಣಾಮಗಳನ್ನು ಉಂಟುಮಾಡುವಂತವು. ಎಲ್ಲೋ ಚಿಗುರುತ್ತವೆ, ನಮ್ಮನ್ನೆಲ್ಲ ನುಂಗುವಂತಹ ಪರಿಸ್ಥಿತಿ ಸೃಷ್ಟಿಸಿ ಸಾಯುತ್ತವೆ. ಯಾಕೆಂದರೆ, ಈ ನಡೆಗಳಲ್ಲಿ ನಮಗೆ ಉಂಟಾಗಬೇಕಾದ ಸಂಬಂಧಕ್ಕೆ ತಕ್ಕ ಸತ್ವ ಅವುಗಳಲ್ಲಿ ಇರುವುದಿಲ್ಲ. ಕಳೆದ ಲೋಕಸಭಾ ಚುನಾವಣೆಗಳಲ್ಲಿ ಪ್ರತಿಪಕ್ಷಗಳ ಅಭಿಮಾನಿಗಳಾಗಿದ್ದ ಪ್ರಗತಿಶೀಲರಲ್ಲಿ ಅಸಂಖ್ಯ ಮಂದಿ ಬಯಲಿಗೆ ಬರಲೇ ಇಲ್ಲ. ತಮ್ಮನ್ನೇ ಹಾಸ್ಯಾಸ್ಪದ ಮಾಡಿಕೊಂಡಿದ್ದ ಕೆಲವು ರಾಜಕಾರಣಿಗಳು ಈ ನಿಷ್ಕ್ರಿಯತೆಯ ಬಗ್ಗೆ ಕುದೀತಿದ್ದಾರು. ಆದರೆ ಯಾವ ನಿರ್ಣಯ

ಗಳಿಗೆ ಜನತಾಂತ್ರಿಕ ಹಿನ್ನೆಲೆ ಇರೋಲ್ಲವೋ ಆ ನಿರ್ಣಯಗಳಿಗೆ ಜನರು ಹೇಗೆ ಬದ್ಧರಾದರು ? ಆದರೆ ಆಯ್ಕೆಯೇ ಸಾಧ್ಯವಾಗದಿದ್ದ ಕಾಲದಲ್ಲಿ ನಮಲ್ಲಿ ಅನೇಕರು ನಿಷ್ಕ್ರಿಯರಾಗಿದ್ದು ಇಂದು ದಿಕ್ಕು ತಪ್ಪಿದ ಗಳಿಗೆಯಲ್ಲಿ ದಿಕ್ಕು ಹುಡುಕುತ್ತಿದ್ದೇವೆ.

ಸಂಘರಾಜ್ಯ ತತ್ವಗಳಲ್ಲಿ ನಮಗೆ ಅಂತ ಕಾಳಜಿ ಇರಲಿಲ್ಲ. ನೆಹರೂನಿಂದ ಇಂದಿನವರೆಗೆ ನೀರು, ಬೆಳಕು, ಉದ್ಯೋಗ, ಬದುಕು, ಸಂಸ್ಕೃತಿ - ಎಲ್ಲಕ್ಕೂ ಈ ಗಣತಾಂತ್ರಿಕ ಚಹರೆ ನೇರ ಸಂಬಂಧಿಸಿದ್ದು. ಅಧಿಕಾರ ಪಡೆದುಕೊಳ್ಳೋದು, ಹೆಚ್ಚಿಸಿಕೊಳ್ಳೋದು, ಎಗ್ಗಿಲ್ಲದೇ ಬೇಕಾಬಿಟ್ಟಿ ಚಲಾಯಿಸೋದು ಇದು ಇವತ್ತಿನ ರಾಜಕೀಯ ಚಟುವಟಿಕೆಯ ಲಕ್ಷಣ. ಅಧಿಕಾರ ಹೆಚ್ಚುವುದು ಅದನ್ನು ಜನತೆಗೆ ವಿತರಣೆ ಮಾಡುವುದರಿಂದಲೇ ಎನ್ನುವುದು ಯಾವ ಕಾಲದ ಮಾತು; ಪ್ರಸ್ತುತ ಪ್ರಬಲವಾದ ಪರ್ಯಾಯ ರಾಜಕೀಯ ರೂಪಿಸಲು ವೆಂಕಟರಾಂ ನೀಡಿರುವ ಕಾರ್ಯಕ್ರಮ ಆಧಾರಿತ ರಂಗ ಪೊಂದರ ಕರಡಿನ ಬಗ್ಗೆ ಅನ್ನಿಸಿದ್ದು ಇದು. ಈದಿನ ಎಡ ಮತ್ತು ಬಲ ಕಮ್ಯುನಿಸ್ಟ್ ಪಕ್ಷಗಳು ಗಣನೀಯವಾದ ಬೆಂಬಲ ಹೊಂದಿವೆ. ಅವೆರಡೂ ಕಾರ್ಯಕರ್ತರ ಪಕ್ಷಗಳು. ಇವುಗಳನ್ನು ಬಿಟ್ಟು ರಚಿಸಿದ ಪರ್ಯಾಯ ಸಮೀಕರಣ ಅಪೂರ್ಣವಾದದ್ದು. ಅವು ಎಂಥ ಸಂದರ್ಭದಲ್ಲೂ ಇಂದಿರಾ ಸರಕಾರದ ದಮನಕ್ರಿಯೆಗೆ ಪ್ರಬಲವಾದ ವಿರೋಧ ನೀಡುವ ಶಕ್ತಿಹೊಂದಿರುವಂಥವು, ಆದರೆ ಇವೆರಡು ಪಕ್ಷಗಳ ರಾಜಕೀಯ ನಿರ್ಣಯ ಶಕ್ತಿ ಅನುಮಾನದೂರವಾದುದಲ್ಲ. ಅಸ್ಸಾಂಘಟನೆಗಳಿಂದ, ಈ ಪಕ್ಷಗಳು ಜನ ಚಳುವಳಿಯನ್ನು ಹತ್ತಿಕ್ಕಲು ಕಡಿಮೆ ಅಪಾಂತರ ನಡೆಸುವುದಿಲ್ಲವೋ ಎಂದು ಸಂಶಯವಾಗುತ್ತದೆ. ವೆಂಕಟರಾಂ ಸಲಹೆಯಲ್ಲಿ 'ಮಹಾತ್ಮ ಗಾಂಧಿ ತತ್ವಗಳನ್ನು ಆಧರಿಸಿದ ಉದಾರವಾದ....' ಎನ್ನುವ ಮಾತುಗಳು ಇರದಿದ್ದರೆ ಅವು ಇಂತಹ ರಂಗದಲ್ಲಿ ಪಾಲ್ಗೊಳ್ಳಬಹುದು. ಈ ಮಾತನ್ನು ತೆಗೆಯಲು ಬೇರೆ ಕಾರಣವೂ ಇದೆ. ಈದಿನ 'ಗಾಂಧಿ' ತತ್ವಗಳು ಬಹಳ ಸೋವಿಯಾಗಿಬಿಟ್ಟಿವೆ. ಸುಲಿಗೆಗಾರ, ಸಾಮ್ರಾಜ್ಯಶಾಹಿ, ಜನಾಂಗವಾದಿ. ಕಾರ್ಮಿಕ - ಎಲ್ಲರೂ ಬೆಳಿಗ್ಗೆ ಎದ್ದೊಡನೆ ಮೋಹನದಾಸನ ಹೆಸರು ತೆಗೆದೇ ಮುಂದಡಿ ಇಡುತ್ತಾರೆ. ಆದ್ದರಿಂದ ವ್ಯಾಖ್ಯಾತೀತವೋ ಎನ್ನಿಸುವ ಗಾಂಧೀ ತತ್ವಗಳ ಸಮಾಜವಾದೀ ಭಾಷಾಂತರವನ್ನು ಸಂದೇಹಾತೀತವಾಗಿ ಸ್ಪಷ್ಟಪಡಿಸಿ ಬಳಿಕ ಈ ಕಾರ್ಯಕ್ರಮ ಇರಬಹುದು. ಆಗ ಕಮ್ಯುನಿಸ್ಟರ ಜತೆಗೆ ಕೆಲಸಮಾಡುತ್ತಲೇ ಸದ್ಭಾವನೆಯಿಂದ ಗಾಂಧೀವಾದಿ ಸಮಾಜವಾದಿಗಳು ತಮ್ಮ ಮನಸ್ಸಿಗೆ ಬೇರೆ ಲಯಗತಿ ಉಳಿಸಕೊಳ್ಳಬಹುದು. ಇಲ್ಲದಿದ್ದರೆ, ಅವರು ಮಾರ್ಕ್ಸ್‌ವಾದಿ ಬಂದೂಕಿನ ಕುದುರೆಗಳಾಗುವ ಅಪಾಯವಿದೆ. ಈ ರಾಜಕೀಯ ಪ್ರಯೋಗಕ್ಕೆ ಕರ್ನಾಟಕದ ಎಲ್ಲಕಡೆ ರಂಗದ ಕಾರ್ಯಕ್ರಮಗಳನ್ನು ಸ್ಥಾಪಿಸಿ ಹೋರಾಟಗಳನ್ನೆ ಮಾಡಬೇಕಾಗುತ್ತದೆ. ಇದರಿಂದ ಸಮಾಜ

ವಾದಿಗಳ ತಿಕ್ಕಲಾಟದಿಂದ ಬೇಸತ್ತು ಮಾರ್ಕ್ಸ್‌ವಾದಿ ಪಕ್ಷದ ಕಡೆಗೆ ವಾಲುತ್ತಿರುವ ಅನೇಕ ಯುವಕರು ದಿಕ್ಕುತಿಳಿಯಬಹುದು. ಮತ್ತು ಮಾರ್ಕ್ಸ್‌ವಾದಿಗಳೂಸಹ ನಿಜವಾಗಿ ಜನತಾಂತ್ರಿಕ ವಿಧಾನಗಳನ್ನೂ ಅಭ್ಯಸಿಸುವ ಅಳವಡಿಸಿಕೊಳ್ಳುವ ಜನಪಕ್ಷಗಳಾಗುವ ಅವಕಾಶ ಸಹ ದೊರೆಯುತ್ತದೆ.

—ಪುರುಷೋತ್ತಮ .ಎ

## ಪ್ರತಿಕ್ರಿಯೆ—೨

ಸಣ್ಣ ಮಾತು ಮತ್ತು ಸಿನಿಕಚರ್ಚೆಗಳೆ ಮುಖ್ಯವಾಗಿರುವ ಇಂದಿನ ಸಾಂಸ್ಕೃತಿಕ ರಾಜಕೀಯ ವಾತಾವರಣದಲ್ಲಿ ವೆಂಕಟರಾಂರವರ ಲೇಖನಗಳು ಗಂಭೀರ ಅಧ್ಯಯನ ಮತ್ತು ಚರ್ಚೆಗೆ ಸೂಕ್ತ ವೇದಿಕೆಯಾಗಿದೆ.

ಯಾವುದೇ ರಾಜಕೀಯ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಕುರಿತು ಆಲೋಚಿಸುವಾಗ ಮುಸ್ಲಿಂ ಪ್ರಶ್ನೆಯನ್ನು ಗಮನಿಸುವುದು ಅಗತ್ಯವಾಗಿದೆ. ವೆಂಕಟರಾಂರವರ ಲೇಖನದಲ್ಲಿ ಈ ಪ್ರಶ್ನೆಯ ಪ್ರಸ್ತಾಪವೆ ಇಲ್ಲ. ಈ ರೀತಿ ಪ್ರಸ್ತಾಪವಿಲ್ಲದಿರುವುದು ಕೇವಲ ಆಕಸ್ಮಿಕ ಎಂದು ಭಾವಿಸುವುದು ತಪ್ಪಾಗುತ್ತದೆ. ಮುಸ್ಲಿಂ ಪ್ರಶ್ನೆ ಮೊದಲಿನಿಂದಲು ವಾಮ ಪಂಥಿಗಳು ಗಣನೆಗೆ ತೆಗೆದುಕೊಳ್ಳುವ ಪ್ರಶ್ನೆಯಾಗಿದೆ. ಈವತ್ತು ಕೂಡ ಕೇರಳದಲ್ಲಿ ಮುಸ್ಲಿಂಲೀಗ್ ಸಾಕಷ್ಟು ಬಲವಾಗಿದೆ. ಯಾವುದೇ ಎಡಪಕ್ಷದಲ್ಲಾಗಲೀ ಬಲಪಕ್ಷದಲ್ಲಾಗಲೀ ಒಬ್ಬ ರಾಷ್ಟ್ರೀಯ ಮಟ್ಟದ ಮುಸ್ಲಿಂ ನಾಯಕನಿಲ್ಲ. ಎಡಪಕ್ಷಗಳು ಅಲ್ಪ ಸಂಖ್ಯಾತರ ಬಗ್ಗೆ ತಳೆಯುವ ಧೋರಣೆ ಬಲಪಕ್ಷಗಳಿಗಿಂತ ಅಂತ ಭಿನ್ನವಾದುದೇನು ಅಲ್ಲ. ಅಲ್ಪಸಂಖ್ಯಾತರ ಪ್ರತ್ಯೇಕ ಸಾಂಸ್ಕೃತಿಕ ಅಸ್ತಿತ್ವವನ್ನು ಗೌರವಿಸುವ ನೆಪದಲ್ಲಿ ಈ ಪಕ್ಷಗಳು ಮುಸ್ಲಿಂಲೀಗಿನೊಡನೆ ತಮಗಿರುವ ಸಖ್ಯವನ್ನು ಸಮರ್ಥಿಸಿಕೊಳ್ಳುತ್ತವೆ. ಮುಸ್ಲಿಂಲೀಗ್ ಮುಸಲ್ಮಾನರ ಸಾಂಸ್ಕೃತಿಕ ಅಸ್ತಿತ್ವಕ್ಕಿಂತಲು ಹೆಚ್ಚಾಗಿ ಈ ರೀತಿಯ ಸಾಂಸ್ಕೃತಿಕ ಅಸ್ತಿತ್ವದ ಮುಖವಾಡದಲ್ಲಿ ಮುಸಲ್ಮಾನರನ್ನು ಇನ್ನು ಸಂಪ್ರದಾಯದ ಕಪಿ ಮುಷ್ಠಿಯಲ್ಲೆ ಹಿಡಿದಿಡಲು ಪ್ರಯತ್ನಿಸುತ್ತಿದೆ ಎಂಬುದು ಸತ್ಯ ಸಂಗತಿ. ಆದರೆ ಮುಸ್ಲಿಂಲೀಗ್ ಅಖಿಲ ಭಾರತ ಮಟ್ಟದಲ್ಲಿ ಒಂದು ಪರಿಣಾಮಕಾರಿಯಾದ ರಾಜಕೀಯಪಕ್ಷವಲ್ಲವಾದ್ದರಿಂದ ಮುಸ್ಲಿಮರು ಸದ್ಯಕ್ಕೆ ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ಅನಾಥರು.

ಹಾಗೆ ನೋಡಿದರೆ ಗಾಂಧಿ ಮತ್ತು ಗಾಂಧಿ ಚಳುವಳಿಗೆ ಮುಸ್ಲಿಮರ ಬಗ್ಗೆ ಒಂದು ಸ್ಪಷ್ಟವಾದ ದೃಷ್ಟಿಕೋನವಿತ್ತು. ಹಿಂದೂ ಮುಸ್ಲಿಂ ಸಮಾನತೆಯನ್ನು ಪ್ರಸ್ತಾ

ಪಿಸಿದ ಗಾಂಧೀಜಿ ಕೆಲವು ಅಪರೂಪದ ರಾಷ್ಟ್ರೀಯ ಮನೋಭಾವದ ಮುಸ್ಲಿಂನಾಯು ಕರನ್ನು ಕೊಟ್ಟರು. ವೆಂಕಟರಾಂರವರ ಲೇಖನ ಕರ್ನಾಟಕದ ಬಗ್ಗೆ ಇದ್ದರೂ - ಈ ಪ್ರಶ್ನೆಯನ್ನು ಸಹ ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ ಎಂದು ನನ್ನ ಅಭಿಪ್ರಾಯ.

ಫೆಡರಲ್ ಪ್ರಶ್ನೆ ಒಂದಲ್ಲ ಒಂದು ರೀತಿಯ ನಮ್ಮ ದೇಶದಲ್ಲಿ ಇತಿಹಾಸದಲ್ಲಿ ಹಾಸು ಹೊಕ್ಕಾಗಿದೆ. ಎರಡು ಸಾವಿರ ವರ್ಷಗಳ ಇತಿಹಾಸದಲ್ಲಿ ಭಾರತ ಇಡಿಯಾಗಿ ಉಳಿದಿದ್ದು ಒಂದೆರಡು ನೂರು ವರ್ಷಗಳಿರಬಹುದು, ಉಳಿದಾಗಲೆಲ್ಲ ಪ್ರಾಂತೀಯ ಮನೋಭಾವದ ನಾಯಕರುಗಳ ರಾಜರುಗಳ ದರ್ಬಾರೆ. ಇವುಗಳಲ್ಲಿ ಯಾವುದಕ್ಕೂ ದೀರ್ಘ ಇತಿಹಾಸವಿಲ್ಲ. ಹುಟ್ಟಿವೆ. ನಶಿಸಿವೆ. ಮತ್ತೆ ಹುಟ್ಟಿವೆ. ಇಲ್ಲಿ ಒಂದು ಗಮ ನಿಸಬೇಕಾದ ವಿಷಯವಿದೆ. ಭಾರತ ಇಡಿಯಾಗಿದ್ದಾಗ ಪ್ರಾದೇಶಿಕ ಸಂಸ್ಕೃತಿಯನ್ನು ಸಹಿಸಿಕೊಳ್ಳಬಲ್ಲ, ಹಠಮಾರಿಗಳಲ್ಲದ ಹೊಸ ವಿಚಾರಗಳಿಂದ ತುಂಬಿದ Benelvolent Manarius ದೊರಕಿದ್ದಾರೆ. ಚಂದ್ರಗುಪ್ತಮೌರ್ಯ, ಅಶೋಕ, ಅಕ್ಬರ್ ಮತ್ತು ಕೆಲಮಟ್ಟಿಗೆ ನಮ್ಮ ಕಾಲದಲ್ಲಿ ಪಂಡಿತ್ ನೆಹರೂ ಇದಕ್ಕೆ ಉದಾಹರಣೆಯಾಗಿದ್ದಾರೆ. ನಾನು ಹೇಳಿದ ಈ ವ್ಯಕ್ತಿಗಳ ಎಲ್ಲ ಕಾರ್ಯಕ್ರಮಗಳು, ಎಲ್ಲ ವಿಚಾರಗಳು ಸರಿಯಿಲ್ಲದೆ ಇರಬಹುದು. ದೇಶದ ಉದ್ದಗಲದಲ್ಲು ಜನರು ಒಪ್ಪಿಕೊಳ್ಳಬಹುದಾದಂತಹ ಕೆಲವು ವಿಚಾರಗಳು, ಕಾರ್ಯಕ್ರಮಗಳು ಈ ನಾಯಕರುಗಳ ಬಳಿ ಇದ್ದುದು ಅವರ ಕಾಲದಲ್ಲಿ ಭಾರತ ಇಡಿಯಾಗಿದ್ದುದು ಕೇವಲ ಆಕಸ್ಮಿಕವಲ್ಲ. ಪ್ರಾದೇಶಿಕ ಸಂಸ್ಕೃತಿಗಳ ಪ್ರತ್ಯೇಕ ಸಾಂಸ್ಕೃತಿಕ ಅಸ್ತಿತ್ವವನ್ನು ಮೀರಿ ಎಲ್ಲ ಭಾರತೀಯರನ್ನು ಒಪ್ಪಿಸುವ, ಎಲ್ಲ ಭಾರತೀ ಯರು ಬಯಸುವ ಕಾರ್ಯಕ್ರಮಗಳು, ವಿಚಾರಗಳನ್ನು ಹೊಂದಿದ ನಾಯಕರುಗಳಾಗಲಿ, ಪಕ್ಷವಾಗಲಿ ಇಲ್ಲದ್ದು ನಮ್ಮ ಕಾಲ. ಆ ರೀತಿ ನೋಡಿದರೆ ರಷ್ಯಾ ಮತ್ತು ಸ್ವಿಟ್ಜರ್ ಲೆಂಡ್‌ನಲ್ಲಿ ಇರುವ 'Confederal' ವ್ಯವಸ್ಥೆಯಲ್ಲಿ ಆ ದೇಶದ ವಿವಿಧ ಪ್ರಾಂತಗಳ ಪ್ರತ್ಯೇಕ ಸಾಂಸ್ಕೃತಿಕ ಅಸ್ತಿತ್ವವನ್ನು ಗುರುತಿಸುವ ಪ್ರಯತ್ನವನ್ನು ಸಾಕಷ್ಟು ಯಶಸ್ವಿ ಯಾಗಿಯೆ ಮಾಡಲಾಗಿದೆ.

ದಿಲ್ಲಿಯಲ್ಲಿ ದೊರೆಗಳು ಮತ್ತು ಪ್ರಾಂತೀಯ ಸಂಸ್ಕೃತಿಯಷ್ಟೆ ಇಲ್ಲಿ ಪ್ರಶ್ನೆಯಲ್ಲ. ಒಂದು ಪ್ರಾಂತ್ಯದೊಳಗಡೆ ಕೂಡ ಅನೇಕ Sub-Cultureಗಳಿವೆ. ನಾಳೆ ನಿಜ ವಾಗಿಯು ಸ್ವಾಯತ್ತ ರಾಜ್ಯಗಳು ಅಸ್ತಿತ್ವಕ್ಕೆ ಬಂದರೆ ಪ್ರತಿಯೊಂದು ಪ್ರಾಂತ್ಯದ Sub-Cultureಗಳಲ್ಲಿ ಯಾವುದೋ ಒಂದೆರಡು Sub–Cultureಗಳು ಯಜಮಾನ ಸಂಸ್ಕೃತಿಯ ಮಟ್ಟಕ್ಕೆ ಏರಿಸಲ್ಪಡಬಹುದು. ಇದಕ್ಕೆ ಕೊನೆಯಿರಲಿಕ್ಕೆ ಸಾಧ್ಯವಿಲ್ಲ. ಈ ಪ್ರಶ್ನೆಯನ್ನು ಬೇರೊಂದು ದೃಷ್ಟಿಯಿಂದ ಕೂಡ ನೋಡಬಹುದಾಗಿದೆ.

ಇಂದಿನ ಭಾರತದ ವಿವಿಧ ರಾಜ್ಯಗಳು ವಿಕಾಸಗೊಂಡ ರೀತಿಯೇ ಭಿನ್ನವಾಗಿದೆ. ಸ್ಥೂಲವಾಗಿ ಪ್ರತಿಯೊಂದು ರಾಜ್ಯ ಇತಿಹಾಸದಲ್ಲಿ ಒಂದು ಸ್ಪಷ್ಟ ಘಟ್ಟವನ್ನು ತಲುಪಿರುವ ಹಾಗೆ ಆ ರಾಜ್ಯದ ಕೆಲವು ಭಾಗಗಳು ಇತಿಹಾಸದ ಬೇರೊಂದು ಘಟ್ಟದಲ್ಲಿ ಇರಲಿಕ್ಕು ಸಾಕು. ಉತ್ತರ ಪ್ರದೇಶವನ್ನೆ ಉದಾಹರಣೆಗೆ ತೆಗೆದುಕೊಳ್ಳುವುದಾದರೆ ಪಶ್ಚಿಮ ಉತ್ತರ ಪ್ರದೇಶಕ್ಕೆ ಮತ್ತು ಪೂರ್ವ ಉತ್ತರ ಪ್ರದೇಶಕ್ಕೆ ಅನೇಕ ವ್ಯತ್ಯಾಸಗಳಿವೆ. ಇದು ಆರ್ಥಿಕ ಸ್ಥಿತಿಗತಿಯನ್ನು ಕುರಿತ ಮಾತು. ಕೈಗಾರಿಕೀಕರಣ, ಶಿಕ್ಷಣ ಪ್ರಸಾರ, ನಗರೀಕರಣ ಆಗಿರುವ ಬಂಗಾಳದಲ್ಲಿ ಜಾತಿಗಿಂತ ವರ್ಗದ ಕಲ್ಪನೆ ಹೆಚ್ಚು ಸತ್ಯವಾದ ಮಾತು. ತಮಿಳುನಾಡು ಇನ್ನು ಹತ್ತು ವರ್ಷಕ್ಕೆ ವರ್ಗ ಕಲ್ಪನೆಯನ್ನು ಕುರಿತು ಮಾತಾಡಬಹುದು. ಆ ಹೊತ್ತಿಗೆ ಆಂಧ್ರಪ್ರದೇಶದಲ್ಲಿ ಹುದ್ದೆ ಮೀಸಲಾತಿಯಂತಹ ಸಾಮಾಜಿಕ ಸುಧಾರಣಾ ಕಾರ್ಯಕ್ರಮಗಳು ಪ್ರಸ್ತಾಪವಾಗಬಹುದು. ಹಿಮಾಚಲ ಪ್ರದೇಶದಲ್ಲಿ ಬಹುಪತಿತ್ವವನ್ನು ವಿರೋಧಿಸಿ ಆಗ ಚಳುವಳಿ ಪ್ರಾರಂಭವಾಗಬಹುದು. ಹೀಗೆ ಉದಾಹರಣೆಗಳನ್ನು ಬೆಳೆಸುತ್ತಲೇ ಹೋಗಬಹುದು. ಮುಖ್ಯ ಎಂದರೆ– ಪ್ರತಿಯೊಂದು ಪ್ರಾಂತ್ಯ ಮತ್ತು ಅದರೊಳಗಿನ ವಿವಿಧ ಘಟಕಗಳು ಇತಿಹಾಸದ ಬೇರೆ ಬೇರೆ ಘಟಕಗಳು ಇದೆಯೆಂಬ ಅರಿವುಳ್ಳ ಜನರ ಕೈಗೆ ರಾಷ್ಟ್ರ ಮಟ್ಟದಲ್ಲಿ ಮತ್ತು ರಾಜ್ಯ ಮಟ್ಟದಲ್ಲಿ ಅಧಿಕಾರ ಸೂತ್ರ ದೊರಕಬೇಕಾಗಿರುವುದು. ಈ ಅರಿವು ಬಂದಾಗ ಮಾತ್ರ ಕೇಂದ್ರೀಕರಣ, ವಿಕೇಂದ್ರೀಕರಣ ಪ್ರತ್ಯೇಕವಾದ ಈ ಪ್ರಶ್ನೆಗೆ ಸರಿಯಾದ ಉತ್ತರ ದೊರಕೀತು.

ಇವೆಲ್ಲಕಿಂತ ಮುಖ್ಯವಾಗಿ ಕೊನೆಯ ಸಂಗತಿ - ವೆಂಕಟರಾಂರವರು ಸಮಾಜವಾದಿಗಳ ಅರಾಜಕತೆಯನ್ನು ಕುರಿತು ನೊಂದು ಬರೆದಿದ್ದಾರೆ. ಇದು ಕೇವಲ ಸಮಾಜವಾದಿಗಳ ಅಥವಾ ರಾಜಕಾರಣಿಗಳ ಹಣೆಬರಹವಲ್ಲ. ಜೀವನದ ಎಲ್ಲ ಕ್ಷೇತ್ರದಲ್ಲು ಹೆಚ್ಚು ಕಡಮೆ ಇದೇ ರೀತಿಯ ಜನ ನಾಯಕತ್ವ ವಹಿಸಿದ್ದಾರೆ. ಅಸಹಾಯಕರಾದ ಆಯಾಸಗೊಂಡ ತೀರಿಹೋಗಿರುವ ನಾಯಕತ್ವ ನಮ್ಮದು. ಈ ನಾಯಕತ್ವದಲ್ಲಿನ ಗೊಂದಲಗಳು, ವಿರೋಧಾಭಾಸಗಳು, ವಿಚ್ಛಿದ್ರಕಾರಕ ಪ್ರವೃತ್ತಿಗಳು ನಾಯಕರಿಗೆ ಮಾತ್ರವೆ ಕುತೂಹಲದ ಸಂಗತಿಯಾಗಿದೆ. ಅದೃಷ್ಟವೊ ದುರಾದೃಷ್ಟವೊ ನಮ್ಮ ದೇಶದ ಜನ ತಮಗೆ ಬೇಕಾದಾಗೆಲ್ಲ ರಾಜಕಾರಣಿಗಳ ಸಹಾಯವಿಲ್ಲದೆ, ರಾಜಕೀಯ ಪಕ್ಷಗಳ ಬೆಂಬಲವಿಲ್ಲದೆ ಬದಲಾವಣೆಗಳನ್ನು ತಂದಿದ್ದಾರೆ. ಮಧ್ಯಯುಗದ ಭಕ್ತಿ ಚಳುವಳಿಯಿರಬಹುದು, ನಮ್ಮ ಕಾಲದ ಜೆಪಿ ಚಳುವಳಿ, ಅಸ್ಸಾಂ ಚಳುವಳಿ ಇರಬಹುದು. ಬುದ್ಧನ ಕಾಲದ ಧಾರ್ಮಿಕ ಕ್ರಾಂತಿಯಿರಬಹುದು - ಈ ಎಲ್ಲ ಚಳುವಳಿಗಳ ಹಿಂದೆಯೂ ಅಡಗಿ

ರುವ ನಮ್ಮ ಜನರ ಈ ಮನೋಪ್ರವೃತ್ತಿಯನ್ನು ಈಗಲಾದರೂ ನಾವು ಗುರುತಿಸ ಬೇಕು.

ಕೆ. ಸತ್ಯನಾರಾಯಣ

## 'ನೆಲೆ'ಯಿಲ್ಲದ ಸಮಾಜವಾದಿಗಳು

ಬಾಪು ಹೆದ್ದೂರ ಶೆಟ್ಟರ 'ದಲಿತರು, ಕಮ್ಯುನಿಸ್ಟರು, ಜನತಂತ್ರ ಇತ್ಯಾದಿ' ಲೇಖನವನ್ನು ಶೂದ್ರದ ಜೂನ್ 80ರ ಸಂಚಿಕೆಯಲ್ಲಿ ಓದಿದೆ. ಕಮ್ಯೂನಿಸ್ಟರ ಬಗೆಗಿನ ಅವರ ತಿರಸ್ಕಾರ ಆಕ್ರೋಶ ಅವರನ್ನು expose ಮಾಡಿದೆ. ಅವರ ಮಾನಸಿಕ ಗೊಂದಲ ಯಾರಿಗೂ ಅರ್ಥವಾಗುವಂತದ್ದೆ. ನಮ್ಮ ಕನಿಕರ ಅವರಿಗಿದೆ.

ಈ ಕೊಳೆತ ವ್ಯವಸ್ಥೆಯಲ್ಲಿ ಸಂಭವಿಸುವ ಯಾವುದೇ ಘಟನೆಗಳನ್ನು ಪ್ರತ್ಯೇಕಿಸಿ ನೋಡಲಾಗುವುದಿಲ್ಲ. ವ್ಯವಸ್ಥೆಯ ವಿರೋಧಾಭಾಸಗಳು ಹಾಗೂ ಪಟ್ಟಭದ್ರರ ಶೋಷಣೆ ವೈಯುಕ್ತಿಕ ಘಟನೆಗಳ ರೂಪದಲ್ಲಿ ಸ್ಫುಟಿಸುವುದು ಜನಸಾಮಾನ್ಯರನ್ನು ಅಮಾನವೀಯ ಘಟನೆಗಳ ವಿರುದ್ಧ ಪ್ರತಿಭಟಿಸುವಂತೆ ಮಾಡುವುದರ ಮೂಲಕವೇ ಇಡೀ ವ್ಯವಸ್ಥೆಯ ನಾಶಕ್ಕೂ ಪ್ರಯತ್ನಿಸಬೇಕಾಗುತ್ತದೆ. ಯಾವುದೇ ಸಮಾಜದಲ್ಲೂ ಅಂದಂದಿನ ಪ್ರಚಲಿತ ಸಮಸ್ಯೆಗಳೇ ಪ್ರಗತಿಪರ ಚಳುವಳಿಗೆ ನಾಂದಿ. ಇದನ್ನು ಶೆಟ್ಟರು ಹೇಗೆ ಮರೆಯುತ್ತಾರೋ ಅರ್ಥವಾಗುತ್ತಿಲ್ಲ. ಶೇಷಗಿರಿಯಪ್ಪನ ಕೊಲೆ ಮತ್ತು ಅವನ ಮಗಳ ಮೇಲಿನ ಅತ್ಯಾಚಾರ ಮೂಲಭೂತವಾಗಿ ನಮ್ಮ ವ್ಯವಸ್ಥೆಯ ಬಾಹ್ಯ ಸಂಕೇತಗಳಲ್ಲವೇ ? ಇವುಗಳಿಗೊಂದು ಸಂಘಟನಾತ್ಮಕ ಹಾಗೂ ಸೈದ್ಧಾಂತಿಕ ರೂಪ ಕೊಡುವುದು ತಪ್ಪೇ ?

ಲಾಳಾಪುರರು ಹಲವಾರು ಜನತಾಗಳಿರುವುದನ್ನು ಶೆಟ್ಟರಿಗೆ ತಿಳಿಸಿದ್ದು ಅಪಥ್ಯ ವಾಗಿದೆಯೇನೋ ! ಈ ಪ್ರಶ್ನೆಯನ್ನು ತಾತ್ವಿಕವಾಗಿ ನೋಡುವುದನ್ನು ಬಿಟ್ಟು ಮಾರ್ಕ್ಸ್ ಹೆಸರಿನಲ್ಲಿ ಹಲವಾರು ಪಕ್ಷಗಳಿರುವ ವಿಷಯವನ್ನು ಹೇಳುತ್ತಾ ತಮ್ಮ ನ್ಯಾಯವಾದಿ 'ಕೈ' ಚಳಕವನ್ನು ತೋರಿಸುವುದರಲ್ಲಿ ತೃಪ್ತಿಪಟ್ಟುಕೊಂಡಿದ್ದಾರೆ. ಭಾರತ ಒಂದು ಬಹು ರಾಷ್ಟ್ರೀಯ ದೇಶ ಮತ್ತು ಫ್ಯೂಡಲ್ ಹಾಗೂ ಬಂಡವಾಳಷಾಹಿ ಅಂಶ ಗಳು over lap ಆಗಿವೆ. ಇಲ್ಲಿನ ಸಾಮಾಜಿಕ ಆರ್ಥಿಕ ಪರಿಸ್ಥಿತಿಯನ್ನು ವೈಜ್ಞಾ ನಿಕವಾಗಿ ವಿಶ್ಲೇಷಿಸುವುದರಲ್ಲಿನ ಹಲವಾರು ಸೈದ್ಧಾಂತಿಕ ನಿಲುವುಗಳಿಂದಾಗಿ ಬೇರೆ ಬೇರೆ ಕಮ್ಯೂನಿಷ್ಟ ಪಕ್ಷಗಳಿವೆ. ವ್ಯಕ್ತಿ ಪ್ರತಿಷ್ಟೆಗಾಗಿ, fascist ಧೋರಣೆಗಳಿಂದಾಗಿ,

ಜಾತೀಯ ಕಾರಣಗಳಿಗಾಗಿ ವಿವಿಧ ಜನತಾ ಪಕ್ಷಗಳಿರುವುದನ್ನು ವಿವಿಧ ಕಮ್ಯೂನಿಸ್ಟ ಪಕ್ಷಗಳಿರುವುದರೊಂದಿಗೆ ಹೋಲಿಸಿ ತೃಪ್ತಿಪಟ್ಟುಕೊಳ್ಳುವುದಾದರೆ ನಮ್ಮ ಅಭ್ಯಂತರ ವಿಲ್ಲ.

ಭಾರತದಲ್ಲಿ 'ಜಾತಿ ಸತ್ಯ ವರ್ಗ ಮಿಥ್ಯ' ಎಂದು ಹೊರಟ ಸಮಾಜವಾದಿಗಳ ಸ್ಥಿತಿ ಇಂದೇನು ? ಇಂದಿನ ರಾಜಕಾರಣ ಪಟದಲ್ಲಿ ಅವರು ಎಲ್ಲಿ ನಿಲ್ಲುತ್ತಾರೆ ? ಭಾರತ ದಲ್ಲಿ ಜಾತಿ ಸತ್ಯ ಆದರೆ ವರ್ಗ ನಿತ್ಯ ಸತ್ಯ. ವರ್ಗ ಹಿತಾಸಕ್ತಿಗಳು ಜಾತಿ ಹಿತಾ ಸಕ್ತಿಗಳಿಗಿಂತ ಹೆಚ್ಚು ಪ್ರಭಲವೆಂಬುದನ್ನು ಈ 33 ವರ್ಷಗಳ ಸ್ವತಂತ್ರ ಭಾರತದ ಅನುಭವ ಹೇಳುವುದಿಲ್ಲವೇ ? ಯಾವುದೇ ಜಾತಿಯ ಮುಖ್ಯಸ್ಥರ ಕೈಯಲ್ಲಿ ಅವರ ಜಾತಿ ಅವರ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುವಲ್ಲಿ ಬಳಸುವಲ್ಲಿ ಅಸ್ತ್ರವೆನ್ನುವುದನ್ನು ನಮ್ಮ ಸ್ವತಂತ್ರ ಭಾರತದ ರಾಜಕೀಯ ಹೇಳುವುದಿಲ್ಲವೇ ? ದಲಿತರು ಮೋಸ ಹೋಗ ಲಾರರು ಎನ್ನುವುದನ್ನು ಕಮ್ಯೂನಿಸ್ಟರು ಇನ್ನಾದರೂ ಅರಿಯಬೇಕೆಂಬ ಶೆಟ್ಟರ ವಕೀಲಿ ನಿಜಕ್ಕೂ ತಾರೀಫ್ ಮಾಡುವಂತಿದೆ

ಭಾರತದ ಸ್ವಾತಂತ್ರ್ಯ ಹೋರಾಟ ಮತ್ತು ಅದಕ್ಕಿಂತ ಹೆಚ್ಚಿನ ಪ್ರಚಾರ ದೊರೆತ 1977ರ ದ್ವಿತಿಯ ಸ್ವಾತಂತ್ರ್ಯ ಹೋರಾಟದ ಬಗ್ಗೆ ಶೆಟ್ಟರ ಧಾರಾಳತನದ ವೌಲೀಕರಣದ ಬಗ್ಗೆ ಒಂದು ಮಾತು ಯಾವುದೇ ಪ್ರಗತಿಪರ ಸಾಮಾಜಿಕ-ರಾಜಕೀಯ: ಕೇವಲ ಬಾಹ್ಯ ಸಂಕೋಲೆಗಳನ್ನು ಕಳಚಿಕೊಳ್ಳುವುದಲ್ಲದೆ ತನ್ನ ಎಲ್ಲ ದಾಸ್ಯಗಳಿಂದ ಬಿಡುಗಡೆ ಹೊಂದುವ ಆಶಯವನ್ನು ಹೊಂದಿರುತ್ತದೆ. ನಮ್ಮ ಸ್ವಾತಂತ್ರ್ಯ ಹೋರಾಟ ಹಸಿವಿನಿಂದ ಬಳಲುವ ಅತಿ ನಗ್ನ ಹಳ್ಳಿಯ ಜನತೆಯನ್ನು ಒಳಗೊಂಡಿದ್ದರೂ ಅದು ಉದ್ದೇಶಿತ ರಾಜಕೀಯ ಪ್ರಜ್ಞೆಯಿಂದ ಕೂಡಿರಲಿಲ್ಲ. ಮತ್ತು ಕೇವಲ ಬಂಡ ವಾಳಗಾರರ ಕೈಗೊಂಬೆಯಂತೆ ವರ್ತಿಸಿದರು. ಸ್ವಾತಂತ್ರ್ಯ ನಂತರದ ಜೀವನಕ್ರಮ ಇದನ್ನು ಸಮರ್ಥಿಸುವುದಿಲ್ಲವೇ ? ಇನ್ನು 1977 ರ ಹೋರಾಟ ಕೇವಲ ಭ್ರಮೆ ಹಾಗೂ ತಾಂತ್ರಿಕ ಅಂಶಗಳಿಂದ ಕೂಡಿತ್ತು ಎಂಬುದನ್ನು ಮೂರು ವರ್ಷದ ಜನತಾ ಆಳ್ವಿಕೆ ಹಾಗೂ 80 ರ ಚುನಾವಣಾ ಪಲಿತಾಂಶ ಹೇಳುವುದಿಲ್ಲವೇ ? ಜಗತ್ತಿನ ಯಾವುದೇ ದೇಶದ ಸ್ವಾತಂತ್ರ್ಯ ಹೋರಾಟ ಹೀಗೆ ವಿಫಲಗೊಂಡಿದೆಯೆ ?

ಶೆಟ್ಟರ ಆಕ್ರೋಷ ಅವರ ಅಂತರಂಗವನ್ನು ತಿಳಿಸುವುದರಲ್ಲಿ ಯಶಸ್ವಿಯಾಗಿದೆ. ಸ್ವಾತಂತ್ರ್ಯ ಹೋರಾಟದ ಫಲವನ್ನು 30 ವರ್ಷ ಉಂಡ ನಮ್ಮ ಭಂಡ ರಾಜಕಾರಣಿ ಗಳಂತೆ ದ್ವಿತೀಯ ಸ್ವಾತಂತ್ರ್ಯ ಹೋರಾಟದ ಫಲವನ್ನು ಮುಂದಿನ 30 ವರ್ಷ ಅನು

ಭವಿಸುವ ಹವಣಿಕೆಯಲ್ಲಿ ಇದ್ದವರ ಆಸೆ ನುಚ್ಚು ನೂರಾಗಿದೆ. ಈ ಹೋರಾಟಗಳನ್ನೇ ವೈಭವೀಕರಿಸುತ್ತಾ, ಅವುಗಳ ಅಖಂಡ ಸಾಧ್ಯತೆಗಳನ್ನು ವಿಶ್ಲೇಷಿಸುತ್ತಾ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವ ಶೆಟ್ಟರಂತ ರಾಜಕಾರಣಿಗಳಿಗೆ ಕಮ್ಯೂನಿಸ್ಟರ ದೂರ್ತತನ (?) ನುಂಗಲಾರದ ತುತ್ತು.

ಸಿ. ರಾಜಶೇಖರ

## 'ಪರ್ವ' ಮತ್ತು ಕುಬ್ಜ ಜನರು

ಪರ್ವದ ಬಗ್ಗೆ ಈಗಾಗಲೇ ಸುಮಾರು ಜನ ಪ್ರತಿಕ್ರಿಯಿಸಿದ್ದಾರೆ. ಅವರಲ್ಲಿ ಕೆಲವರು ಆ ಕೃತಿಯನ್ನು ಒರೆಸಿ ಹಾಕಿಬಿಡುವ ರೀತಿಯಲ್ಲಿ ಮಾತನಾಡಿದ್ದಾರೆ. ಸಾಂಪ್ರದಾಯಕ ಶ್ರದ್ಧೆಯಾಚೆಗೆ ದೃಷ್ಟಿ ಹಾಯಿಸಲಾರದ ಕುಬ್ಜ ಮನಸ್ಸುಗಳಿಗೆ ಅದ ಸಹಜವೂ ಹೌದು.

ಪರ್ವದಲ್ಲಿ ಭೈರಪ್ಪನವರು ಮಹಾಭಾರತದ ಕಾಲದ ಧರ್ಮವನ್ನೇನೂ ಹೊರತು ಪಡಿಸಿ ಬರೆದಿಲ್ಲ. ಆದರೆ, ಇದುವರೆಗೂ ನಾವೆಲ್ಲರೂ ಕೇಳಿದ್ದ ಅಲ್ಲಿನ ಅತಿರಂಜಿತ ಘಟನೆಗಳು, ಪವಾಡಗಳು, ಭ್ರಮಾತ್ಮಕ ಸಂಗತಿಗಳನ್ನೆಲ್ಲ ಕೊಚ್ಚಿ, ಹಲವಾರು ಸತ್ಯಸಂಗತಿಗಳ ಮೇಲೆ ಬೆಳಕು ಚೆಲಿದ್ದಾರೆ. ಮಂತ್ರದಿಂದ ಮಾವಿನಕಾಯಿ ಉದುರುವುದಿಲ್ಲ ಅಂತ ಕುಂತಿ ಸಂತಾನದ ರಹಸ್ಯ ಬಯಲು ಮಾಡಿದ್ದಾರೆ, ಗಾಂಧಾರಿಯ ಕಣ್ಣುಕಟ್ಟನ್ನು ಕಳಚಿದ್ದಾರೆ. ಕೃಷ್ಣನ ಮಾಯೆಯನ್ನು ಹರಿದು ಮನುಷ್ಯನನ್ನಾಗಿ ತೋರಿಸಿದ್ದಾರೆ. ಗೋವಿಗೆ ಯಾವ ರೀತಿಯ ಪೂಜೆ ಸಲ್ಲುತ್ತಿತ್ತೆಂಬುದುನ್ನು ಶಲ್ಯನ ಪಾಕಶಾಲೆಯಲ್ಲಿ ಕಾಣಿಸುತ್ತಾರೆ. ಹೀಗೆ ಪಟ್ಟಿ ಬೆಳೆಸುತ್ತಾ ಹೋಗಬಹುದು. ಒಟ್ಟಿನಲ್ಲಿ ಪರ್ವ ಮಹಾಭಾರತದ ನಿಜವಾದ ಜೀವನದ ವಿಶ್ವರೂಪ ದರ್ಶನ ಮಾಡಿಸುತ್ತದೆ: ಗೀತಾರಹಸ್ಯವನ್ನು ಭೇದಿಸುವುದರ ಜತೆಗೇ.

ಮೊದಲೆಲ್ಲ ಭೈರಪ್ಪನವರ ಬಗ್ಗೆ ಒಂದು ರೀತಿಯ ವಿರೋಧ ಭಾವನೆಬೆಳೆಸಿಕೊಂಡಿದ್ದವನಿಗೆ ಪರ್ವ ಓದಿದ ಮೇಲೆ ಅವರ ಬಗ್ಗೆ ಮೊದಲಿದ್ದ ಭಾವನೆಗಳೆಲ್ಲ ಕರಗಿ ಹೋದವು. ಈ ಹಿಂದೆ ಭೈರಪ್ಪನವರು ಬರೆದದ್ದೆಲ್ಲ ಪರ್ವಕ್ಕೆ ಸಾಟಿಯಾಗಿ ನಿಲ್ಲಲಾರದು ಎನಿಸುತ್ತದೆ. ಸಾಂಪ್ರದಾಯಕ ಮೌಲ್ಯಗಳನ್ನು ಮಾನವೀಯವಾಗಿ ಒರೆಗೆ ಹಚ್ಚಿ ನೋಡಬಲ್ಲವರಿಗೆ 'ಪರ್ವ' ಒಂದು ಸವಾಲಾಗುತ್ತದೆ. ಇದೇ ರೀತಿ ರಾಮಾಯಣವನ್ನೂ ಸಹ ಭೈರಪ್ಪ ಅವರು ಬರೆಯಬಾರದೆ ಅನಿಸುತ್ತದೆ.

ಬಿ. ರಾಜಣ್ಣ
ಭದ್ರಾವತಿ

# KARNATAKA ELECTRICITY BOARD

## Safety First and Safety Last

1. Do not tie cattle, sheep etc., to the pole.
2. Do not touch snapped conductors. Cordon the area and inform nearest Board Office or Lineman camp immediately.
3. Do not try to extricate with bare hands a person caught in an electrical accident. The chances are you would be electrocuted. Stand on a dry wooden plank and bring the person to safety with a dry stick or rope.
4. Do not load carts or lorries over 14 feet above the ground level. Do not sit on the loaded vehicles as there are chances of accidents.
5. Do not use service main as clothes line.
6. Maintain minimum clearance of 4 feet from the power lines while constructing buildings.
7. Change the bulb, fuse, etc., only after switching-off the main switch.
8. Do not energise fences for protection of crops from thefts.
9. Do not climb the trees near the power lines.
10. Electrical wiring and other equipment should be handled only by licensed electrical contractors.
11. Do not lean on poles nor touch them.
12. Do not grow plants underneath or in the vicinity of the power line. Maintain atleast 10 feet clearance from the line whenever tall trees are planted.
13. Use the right size of fuse. This protects the equipment and also yourself. In the vicinity of electrical accident, please intimate the nearest Board Office or Lineman camp and also police.

    Beware of Electrical Accidents. Follow Safety Code.

# ಸುದ್ದಿಯಲ್ಲಿ ಜಾತೀಯತೆ

ಬಿ. ಎ. ಶ್ರೀಧರ

**ಒಂದು ಟಿಪ್ಪಣಿ :**

ಪತ್ರಿಕೋದ್ಯಮಿಗಳ ಹೊಣೆಗಾರಿಕೆಯ ಬಗ್ಗೆ ಬಹಳಷ್ಟು ಮಂದಿ ಹೇಳಿದ್ದಾರೆ ಮತ್ತು ಬರೆದಿದ್ದಾರೆ. ತಮ್ಮ ಹೊಣೆಗೇಡಿತನದಿಂದಾಗಿ ಪತ್ರಿಕೆಗಳು ಸಮಾಜಕ್ಕೆ ಅನೇಕ ಬಗೆಯಲ್ಲಿ ಕಂಟಕಗಳನ್ನು ತಂದೊಡ್ಡಿವೆ. ಅಜಾಗರೂಕತೆ ಮತ್ತು ಬೇಜವಾಬ್ದಾರಿಯಿಂದ ಪತ್ರಿಕೆಗಳು ಮತ್ತು ಪತ್ರಿಕೋದ್ಯಮಿಗಳು ಯುದ್ಧಗಳನ್ನೇ ಮಾಡಿಸಿರುವ ನಿದರ್ಶನಗಳೂ ಇತಿಹಾಸದಲ್ಲಿವೆ.

ಅಕ್ಷರಸ್ಥರಿರುವ ಮತ್ತು ತಿಳುವಳಿಕೆಯುಳ್ಳವರಿರುವ ಸಮಾಜದಲ್ಲಿ ಮಾಡುವ ಪತ್ರಿಕಾ ವ್ಯವಸಾಯಕ್ಕೂ, ಅನಕ್ಷರಸ್ಥರೇ ಹೆಚ್ಚಿರುವ ಮತ್ತು ಮೌಢ್ಯತೆ ಇರುವ ಸಮಾಜದಲ್ಲಿ ನಡೆಯಿಸುವ ಪತ್ರಿಕಾ ವ್ಯವಸಾಯಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಜಾಗೃತವಾಗಿರುವ ಮತ್ತು ಸಕ್ರಿಯವಾದ ಮೊದಲನೇ ಬಗೆಯ ಸಮಾಜದಲ್ಲಿ ಓದುಗರನ್ನು ತಪ್ಪುದಾರಿಗೆ ಎಳೆಯುವುದು ಮತ್ತು ಪತ್ರಿಕೋದ್ಯಮ ಬರವಣಿಗೆಗಳಿಂದಾಗಿ ಜನರನ್ನು ಪ್ರಚೋದಿಸುವುದು ಕಷ್ಟದ ಕೆಲಸ. ಆದರೆ, ಎರಡನೆಯ ಬಗೆಯ ಸಮಾಜದಲ್ಲಿನ ಪರಿಸ್ಥಿತಿಯೇ ಬೇರೆ. ಓದುಗರ ಸಂಖ್ಯೆ ಕಡಿಮೆ ಇರುವ ಮತ್ತು ಪತ್ರಿಕೆಗಳನ್ನು ಓದುವವರೂ ಜಾಗೃತರಲ್ಲದ ಇಲ್ಲಿ, ಅವರ ಮುಗ್ಧತೆ ಮತ್ತು ಮೌಢ್ಯತೆಯ ದುರ್ಲಾಭವನ್ನು ಪಡೆಯುವುದು, ಪತ್ರಿಕೋದ್ಯಮಿಗಳಿಗೆ ಬಹು ಸುಲಭ. ಈ ರೀತಿಯ ಬರವಣಿಗೆಗಳನ್ನು ಬರೆಯುತ್ತಲೂ, ಪತ್ರಿಕೋದ್ಯಮಿಗಳು ಸಮಾಜ ಸುಧಾರಕರಾಗುವುದು ಮತ್ತು ಸಮಾಜದ ಗಣ್ಯರಾಗುವುದು ಇಂತಹ ಸಮಾಜಗಳ ದೌರ್ಭಾಗ್ಯ.

ಎರಡನೆಯ ವರ್ಗಕ್ಕೆ ಸೇರಿದ ಭಾರತೀಯ ಪತ್ರಿಕೋದ್ಯಮಿಗಳು, ತಮ್ಮ ಓದುಗರೊಂದಿಗೆ ಒಂದಲ್ಲ ಒಂದು ರೀತಿ ಚಕ್ಕಂದ ವಾಡುತ್ತಲೇ ಇರುತ್ತಾರೆ. ಅಂತಹ

ನೂರಾರು ಆಟಗಳಲ್ಲಿ ಭಾರತೀಯ ಪತ್ರಿಕೋದ್ಯಮಿಗಳು ಜಾತಿಯಂತಹ ಅತ್ಯಂತ ಸೂಕ್ಷ್ಮವಾದ ಮತ್ತು ಆಸ್ಫೋಟಕವಾದ ವಿಷಯಗಳನ್ನು ಪ್ರಸ್ತಾಪಿಸುವಲ್ಲಿ ತೋರುವ ಜಾಣ್ಮೆಯ ಅಧ್ಯಯನ ತುಂಬಾ ಆಸಕ್ತಿ ಪೂರ್ಣವಾದದ್ದು.

ಮೂಲಭೂತವಾಗಿ ಜನಸಾಮಾನ್ಯ ಕೋಮುವಾದಿಯಲ್ಲ. ಆದರೆ ಅವನಲ್ಲಿ ಜಾತೀಯತೆಯನ್ನು ಹುಟ್ಟು ಹಾಕುವ ಮತ್ತು ಕೋಮುಭಾವನೆಯನ್ನು ಜಾಗೃತಿಗೊಳಿಸುವ ಅನೇಕ ಸಂಸ್ಥೆಗಳು ನಮ್ಮಲ್ಲಿ ತಲೆ ಎತ್ತಿವೆ. ನಾನು ಮೈಸೂರಿನ ಒಂದು ಪ್ರಸಿದ್ಧ ಕಾಲೇಜಿನ ಮೆಟ್ಟಿಲು ಹತ್ತುವ ತನಕ ನನಗೆ ನನ್ನ ಜಾತಿಯ ವಿರುದ್ಧ ಮತ್ತೊಂದು ಜಾತಿಯಿದೆ, ಆ ಜಾತಿಯವರೊಂದಿಗೆ ನಾನು ಸೇರಬಾರದು ಮತ್ತು ಅವರನ್ನು ಸದಾ ದ್ವೇಷಿಸಬೇಕು ಎನ್ನುವುದು ನನ್ನ ಅರಿವಿಗೇ ಬಂದಿರಲಿಲ್ಲ. ಆದರೆ, ಕಾಲೇಜಿಗೆ ಸೇರಿದ ಆರು ತಿಂಗಳಲ್ಲಿ ಜಾತಿ, ಪಂಗಡಗಳ ಬಗ್ಗೆ ಸಾಕಷ್ಟು ತಿಳುವಳಿಕೆ ಬಂದಿತ್ತು. ನಾನು ಕಾಲೇಜಿಗೆ ಸೇರದೆ, ಹಳ್ಳಿಯ ವಾತಾವರಣದಲ್ಲಿಯೇ ಇದ್ದಿದ್ದಲ್ಲರೆ, ಈ ಎಲ್ಲಾ ಅನಗತ್ಯ ಸಂಗತಿಗಳೂ ನನ್ನ ಗಮನಕ್ಕೆ ಬರುತ್ತಲೇ ಇರಲಿಲ್ಲವೇನೋ ಎಂದು ಈಗಲೂ ಯೋಚಿಸುತ್ತೇನೆ. ಹಾಗೆಯೇ ನಮ್ಮ ಪತ್ರಿಕೆಗಳ ಓದುಗರೂ ಹಲವು ಬಾರಿ, "ನಾವು ಪತ್ರಿಕೆಗಳನ್ನು ಓದದಿದ್ದರೆ ಚೆನ್ನಾಗಿತ್ತೇನೋ", ಎಂದುಕೊಳ್ಳುತ್ತಿರಲೂ ಸಾಧ್ಯ.

ನಮ್ಮ ಪತ್ರಿಕೆಗಳಲ್ಲಿ ಜಾತಿ ಅನೇಕ ರೂಪಗಳಲ್ಲಿ ಮತ್ತು ಅನೇಕ ಘಟ್ಟಗಳಲ್ಲಿ ತಲೆ ಎತ್ತುತ್ತದೆ. ಕೆಲವು ಸಂದರ್ಭಗಳಲ್ಲಿ ಅದು ಅನಗತ್ಯವೆನಿಸಿದರೆ, ಮತ್ತೆ ಕೆಲವೆಡೆಗಳಲ್ಲಿ ಅದು Obvious ಆಗಿ ಪ್ರಕಟವಾಗುತ್ತದೆ. ಉದಾಹರಣೆಗೆ ; ಚುನಾವಣಾ ಸಮಯಗಳಲ್ಲಿ ನಮ್ಮ ಪತ್ರಿಕೆಗಳು ನಡೆಯಿಸುವ ಸಾಕ್ಷಾತ್ ಸಮೀಕ್ಷೆ, ಮುಕ್ಕಾಲು ಪಾಲು ವಿವಿಧ ಕ್ಷೇತ್ರಗಳ ಜಾತಿ ಸಮೀಕ್ಷೆಯಾಗುವುದು ಎಲ್ಲರ ಗಮನಕ್ಕೂ ಬಂದಿರಲಿಕ್ಕು ಸಾಕು. ಯಾವ ಕಾಲಕ್ಕೂ ಜಾತಿ ಚುನಾವಣೆಗಳ ದಿಕ್ಸೂಚಿಯಾಗಿಲ್ಲ. ಆದರೆ ನಮ್ಮ ವರದಿಗಾರರು ಜಾತಿಯ ಮಂಥನ ಮಾಡದೆ, ಚುನಾವಣೆಗಳ ಲೆಕ್ಕಾಚಾರವನ್ನು ಮುಗಿಸುವುದೇ ಇಲ್ಲ. ಬಹುಶಃ ಆಯಾ ಕ್ಷೇತ್ರದ ಜನರಿಗೆ ತಮ್ಮ ಸುತ್ತಮುತ್ತಲಿರುವ ಜಾತೀಯ ಸ್ಪಷ್ಟವಾದ ಮತ್ತು ಕರಾರುವಕ್ಕಾದ ಚಿತ್ರಣ ಸಿಗುವುದು ಇಂತಹ ಸಮೀಕ್ಷೆಗಳನ್ನು ಓದಿದಾಗಲೇ.

ಪತ್ರಿಕೆಗಳ ಪ್ರಕಟಣೆಗೆ ಇಂತಹ ವರದಿಗಳು ಅತ್ಯಂತ ಅಗತ್ಯವೇ ? ಅನೇಕ ಬಾರಿ ವರದಿಗಾರ ಮಿತ್ರರನ್ನು ಈ ಬಗ್ಗೆ ಪ್ರಶ್ನಿಸಿದ್ದೇನೆ. ಆದರೆ ಅವರಿಂದ ಸಮಾಧಾನ

ಕರವಾದ ಉತ್ತರ ಇನ್ನೂ ಸಿಗಬೇಕಾಗಿದೆ. ನಮ್ಮ ವರದಿಗಾರರು ಸ್ವತಃ ತಾವೇ ರೂಢಿಸಿಕೊಳ್ಳುವ ಸಂಕುಚಿತ ಮತ್ತು ಕೋಮು ಭಾವನೆಯ ಪ್ರತಿಬಿಂಬಗಳನ್ನು ನಾವು ಅವರ ಈ ಬಗೆಯ ಬರವಣಿಗೆಯಲ್ಲಿ ಕಾಣುತ್ತೇವೆ. ಜೊತೆಗೆ ಜಾತಿಯನ್ನೇ ಮುಂದು ಮಾಡಿಕೊಂಡು ಬದುಕುವ ಮಧ್ಯವರ್ಗದ ಮೌಲ್ಯಗಳು ಇವಾಗಿರಲೂ ಸಾಧ್ಯ. ಆದರೆ ಇಂತಹ ಬರವಣಿಗೆಗಳು ಸಮಾಜದ ಮೇಲೆ ತುಂಬಾ ಆಳವಾದ ಮತ್ತು ಅನಿಷ್ಟ ಪರಿಣಾಮಗಳನ್ನುಂಟು ಮಾಡಲು ಸಾಧ್ಯ. ಈ ಬಗೆಯ ಲೇಖನಗಳಿಂದ, ಯಾರಿಗೆ ಯಾವ ವಿಷಯ ತಿಳಿಸಲು ಮತ್ತು ಯಾರ ಮೌಢ್ಯತೆಯನ್ನು ಹೋಗಲಾಡಿಸಲು ಬರೆಯಲಾಗುತ್ತಿವೆ, ಎನ್ನುವುದು ತಿಳಿಯುವುದಿಲ್ಲ. ಜಾತಿಯ ಬಗ್ಗೆ ಇಂತಹ ಪ್ರಸ್ತಾಪ ಅಗತ್ಯ ಮತ್ತು ಪತ್ರಿಕಾ ವರದಿಗೆ ಪೂರಕವಲ್ಲವಾದುದರಿಂದ ಇದು ವರದಿಗಾರರ ತನ್ನ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ತನ್ನ ನೆಲೆಗಟ್ಟಿನಲ್ಲಿ ಪ್ರತಿಕ್ರಿಯಿಸಿ ಬರೆದ ಕೀಳು ಪ್ರಚೋದಕ ಲೇಖನಗಳಾಗುತ್ತವೆ. ಈ ದೇಶದಲ್ಲಿ ಸಮೂಹ ಮಾಧ್ಯಮಗಳನ್ನು ನಿರ್ವಹಿಸುತ್ತಿರುವ ಒಂದು ಮೇಲು ವರ್ಗಕ್ಕಿರುವ ಜಾತಿಯಬಗ್ಗೆ ಮತ್ತು ಪ್ರೇಮವನ್ನು ಇದು ತೋರಿಸುತ್ತದೆ.

ಬರವಣಿಗೆ ಅನಿವಾರ್ಯವಾಗಿ ಬರೆಯುವವನ ಸಂಸ್ಕಾರವನ್ನೂ ಪ್ರತಿಬಿಂಭಿಸುತ್ತದೆ. ಆದ್ದರಿಂದ ಇಂತಹ ಬರವಣಿಗೆ, ನಮ್ಮ ವರದಿಗಾರರ ಅಭಿರುಚಿ, ವ್ಯಕ್ತಿತ್ವ ಹಾಗೂ ನಂಬಿಕೆಗಳನ್ನು ಎತ್ತಿ ತೋರಿಸುತ್ತದೆ. ಸುದ್ದಿಯನ್ನು ಹರಡುವ ಅಥವಾ ಹೆಚ್ಚು ಸುದ್ದಿ ಕೊಡುವ ನೆಪದಲ್ಲಿ ತುಂಬಾ ನಾಜೂಕಾಗಿ ತಮ್ಮ ಜಾತಿಯ ಬಗ್ಗೆ ಇರುವ ಅಭಿಮಾನವನ್ನು ಪ್ರಕಟಿಸಲು ಮತ್ತು ಉತ್ತೇಜಿಸಲು ಪತ್ರಿಕೆಗಳನ್ನು ಮಾಧ್ಯಮವನ್ನಾಗಿ ಬಳಸಿಕೊಳ್ಳುವುದು ಪತ್ರಿಕೋದ್ಯಮದಲ್ಲಿ. ಅಥವಾ ಇದು ನಾವು ಬಯಸುವ ಹೊಣೆಯರಿತ ಪತ್ರಿಕೋದ್ಯಮವಂತೂ ಖಂಡಿತಾ ಆಗಲಾರದು.

'ಸಾಕ್ಷಾತ್ ಸಮೀಕ್ಷೆ'ಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ನಾನು ಈ ಮಾತುಗಳನ್ನು ಬರೆಯುತ್ತಿಲ್ಲ. ಹಾಗೆ ನೋಡಿದರೆ 'ಸಾಕ್ಷಾತ್ ಸಮೀಕ್ಷೆ'ಗಳಲ್ಲಿ ಬರುವ ಜಾತೀಯ ಪ್ರಸ್ತಾಪಕ್ಕಿಂತಲೂ ಪತ್ರಿಕೋದ್ಯಮಿಗಳು ತಮ್ಮ ವರದಿಗಳಲ್ಲಿ ತುಂಬಾ settle ಆಗಿ ಪ್ರಸ್ತಾಪಿಸುವ ಜಾತೀಯ ಬಗೆಗಿನ ಮಾತುಗಳು ಅತ್ಯಂತ ಅಪಾಯಕಾರಿ ಇಂತಹ ಲೇಖನಗಳ ಒಂದು ಸ್ಯಾಂಪಲ್ ನನಗಿರುವ ಭಯವನ್ನು ಧೃಡಪಡಿಸಿತು.

ಇದೇ ವರ್ಷದ ಜನವರಿ 12 ರಂದು ಮುಖ್ಯಮಂತ್ರಿಯಾಗಲು ದೆಹಲಿಯ ಆಶೀರ್ವಾದ ಪಡೆದು ಶ್ರೀ ಗುಂಡೂರಾವ್‌ರವರು ಬೆಂಗಳೂರಿಗೆ ಬರಲಿದ್ದಾರೆ. ಆ

ಸುದ್ದಿಯನ್ನು ಪ್ರಕಟಿಸುತ್ತಾ, ಜನವರಿ 11ನೇ ತಾರೀಖಿನ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯಲ್ಲಿ ಬಂದ ವಿಶೇಷ ವರದಿಯ ಎರಡನೆಯ ಪ್ಯಾರ ಹೀಗಿದೆ :

"Mr. Guudu Rao will fly into B'lore tomorrow afternoon to set a new precedent in Karnataka in the sense that he will be the first Brahmin Chief Minister of the State".

ತಮ್ಮ ಭಾವೀ ಮುಖ್ಯಮಂತ್ರಿಗಳು ಬ್ರಾಹ್ಮಣರೇ, ಹರಿಜನರೇ, ಒಕ್ಕಲಿಗರೇ ಅಥವಾ ಲಿಂಗಾಯಿತರೇ ಎಂದು ತಿಳಿಯಲು ಮುಕ್ಕೋಟಿ ಕನ್ನಡಿಗರಿಗೆ ಕುತೂಹಲವಿತ್ತು ಅದಕ್ಕಾಗಿ ವರದಿಯಲ್ಲಿ ಜಾತಿಯ ಪ್ರಸಾಪ ಎನ್ನುವಂತಿಲ್ಲ. ಆದರೆ, ವರದಿಗಾರರಿಗೆ ಗುಂಡೂರಾಯರು ಬ್ರಾಹ್ಮಣರೆನ್ನುವುದನ್ನು ತಿಳಿಸುವುದರಲ್ಲಿ ಭಾರೀ ಆಸಕ್ತಿಯಿದೆ. ಆತುರವಿದೆ ಎನ್ನುವುದಂತೂ ವೇದ್ಯ. ಇಲ್ಲದಿದ್ದರೆ, ಬ್ರಾಹ್ಮಣರೊಬ್ಬರು ಮುಖ್ಯ ಮಂತ್ರಿಯಾಗುವುದು ಕರ್ನಾಟಕದಲ್ಲಿ ಒಂದು ಹೊಸ ಪರಂಪರೆಯಾಗುವುದಿಲ್ಲ.

• •

## ಬೀದಿ ಮಾತು

### ಇಂಥ ಹೆಂಗಸರೂ ಇರ್ತಾರೆ

**ಒಂದು :**

ಶಾಲಾ ಕಾಲೇಜುಗಳಲ್ಲಿ ದುಡಿಯುವವರನ್ನ ಶೋಷಿಸುವುದು ಹೊಸದೇನಲ್ಲ. ಇತ್ತೀಚಿನ ವರ್ಷಗಳಲ್ಲಿ ಅಧ್ಯಾಪಕರು ಸಂಘಟಿತರಾಗಿರುವುದರಿಂದ ಅವರಿಗೆ ಕೊಡುವ ಕಿರುಕುಳ ಸ್ವಲ್ಪ ಕಡಿಮೆಯಾಗಿದೆಯೆಂದು ಹೇಳಬಹುದು. ಆದರೆ ಇದಕ್ಕೆ ಹೊರ ತಾಗಿರುವ ನಾರಾಯಣರಾವ್ ಮಾನೆ ಕಾಲೇಜು ಬೆಂಗಳೂರಿನ ಒಂದು ಮೂಲೆಯಲ್ಲಿ

ನರಳುತ್ತಿದೆ. ಆರೇಳು ವರ್ಷಗಳ ಚರಿತ್ರೆಯನ್ನು ಹೊಂದಿರುವ ಈ ಕಾಲೇಜು ಚರಿತ್ರೆಯ ಹೊಸಪುಟಗಳನ್ನು ಬರೆಯಲು ತೊಡಗಿದೆ. ಇದನ್ನೂ ಬರೆಯಲು ತೊಡಗಿರುವ ಅಲ್ಲಿಯ ಪ್ರಿನ್ಸಿಪಾಲ್ ಶ್ರೀಮತಿ ಸುನಂದ ಜಾದವ್ ತುಂಬ ಶಿಸ್ತಿನ ಹೆಂಗಸು, ವಿಧಾನಪರಿಷತ್ತಿನ ಸದಸ್ಯ ರಘುಪತಿಯವರು ತಮ್ಮನಾಯಕ (?) ಗುಂಡೂರಾವ್‌ರವರ ಬಗ್ಗೆ ಮಾತಾಡುತ್ತ ; ನಮ್ಮ ನಾಯಕರು 'ಶಿಸ್ತಿನ ಸಿಪಾಯಿ ಅವರನ್ನು ಅಸ್ಸಾಮಿಗೆ ಕಳಿಸಿದರೂ ಕೆಲಸ ಮಾಡ್ತಾರೆ' ಅಂದಿದ್ದಾರೆ. ಇದೇ ಮಾತನ್ನು ಶ್ರೀಮತಿ ಜಾದವ್‌ಗೂ ಅನ್ವಯಿಸಿ ಅಂಡಮಾನ್ ಅಥವಾ ಇತರೆ ಗುಡ್ಡಗಾಡು ಪ್ರದೇಶಕ್ಕೆ ಕಳಿಸಬಹುದು. ಯಾಕೆಂದರೆ ಅಲ್ಲಿಯ ಆದಿವಾಸಿ ಹೆಂಗಸರಿಗೆ ಇಸ್ತ್ರಿ ಮಾಡಿಸಿದ ಬ್ಲೌಸನ್ನ ತೊಡಿಸಬಹುದು. ಶ್ರೀಮತಿ ಜಾದವ್‌ರವರು ಪ್ರಾರ್ಥನೆಯ ಸಮಯದಲ್ಲಿ ಶಿಸ್ತಿನ ಸಿಪಾಯಿಯಾಗಿ ಅಧ್ಯಾಪಕಿಯರು ಯಾಕೆ ತಮ್ಮ ಬ್ಲೌಸ್‌ಗಳನ್ನು ಇಸ್ತ್ರಿ ಮಾಡಿಸಿಲ್ಲವೆಂದು ಕೇಳುತ್ತಾರೆ.

ತುಂಬ ನಗುನಗುತ್ತ ಕೆಲಸ ಮಾಡಿಕೊಂಡು ತಮ್ಮ ಸಂಸ್ಥೆಯನ್ನು ಬೆಳೆಸಿಕೊಂಡು ಹೋಗುವ ಆಸೆಯನ್ನು ಹೊಂದಿರುವ ಅಲ್ಲಿನ ಅಧ್ಯಾಪಕರು ಕಳೆದ ಕೆಲವು ವರ್ಷಗಳಿಂದ ಆ ಸಂಸ್ಥೆಗಾಗಿ ಸಾಕಷ್ಟು ರಕ್ತ ಹರಿಸಿದ್ದಾರೆ. ತಮ್ಮ ಸಂಬಳದ ಬಹುಪಾಲನ್ನು ಆ ಸಂಸ್ಥೆಯ ಉಳಿವಿಗೆ ಮತ್ತು ಬೆಳವಣಿಗೆಗೆ ಕೊಟ್ಟಿದ್ದಾರೆ. ಆದರೆ ಒಬ್ಬ ಹಠಮಾರಿ ಹೆಂಗಸಿನಿಂದ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವ ಹಂತಕ್ಕೆ ತಲುಪಿದ್ದಾರೆ. ಕಳೆದ ಕೆಲವು ವರ್ಷಗಳಿಂದ ಸುಮಾರು ನಲವತ್ತೇಳು ಮಂದಿ ಟರ್ಮಿನೇಟು ಮಾಡಿಸಿಕೊಂಡಿದ್ದಾರೆ.

ಇತ್ತೀಚಿನ ದಿನಗಳಲ್ಲಿ ವಿದ್ಯಾರ್ಥಿಗಳು ಸೀಟು ಸಿಕ್ಕದೆ ಪರದಾಡುತ್ತಿದ್ದಾರೆ. ಆದರೆ ಮೇಲ್ಕಂಡ ಕಾಲೇಜಿನ ಯಜಮಾನರು ಕಾಲೇಜಿಗೆ ಹುಡುಗರು ಬರುವುದಿಲ್ಲವೆಂದು ಹೇಳುವುದರ ಮೂಲಕ ಅಲ್ಲಿಯ ಪೂರ್ಣಾವಧಿ ಅಧ್ಯಾಪಕರನ್ನು ಅಲ್ಪಾವದಿ ಅಧ್ಯಾಪಕರನ್ನಾಗಿ ಮಾಡುವುದರಲ್ಲಿ ತಮ್ಮ ಸೇಡನ್ನು ತೀರಿಸಿಕೊಳ್ಳಲು ತೊಡಗಿದ್ದಾರೆ. ನಮ್ಮ ಶಿಕ್ಷಣ ಕ್ಷೇತ್ರದಲ್ಲಿ ಜಾತೀಯ ಸಂಸ್ಥೆಗಳು ಬೆಳೆದಂತೆ ; ಮ್ಯಾನೇಜ್‌ಮೆಂಟಿನಲ್ಲಿ ಬಂಧುಗಳು ತುಂಬಿಕೊಳ್ಳಲು ತೊಡಗಿದ್ದಾರೆ. ಅಂಥ ಸಂಸ್ಥೆಗಳಲ್ಲಿ ಇದೂ ಒಂದು. ಬೇಕಾದರೆ ಹೋಗಿ ನೋಡಿಕೊಂಡು ಬನ್ನಿ. ಆದರೆ ಶ್ರೀಮತಿ ಜಾದವ್‌ರಂಥ ಸುಂದರ ಹೆಂಗಸನ್ನು ನೋಡದೆ ವಾಪಸ್ಸು ಬರಬೇಡಿ.

●

ಎರಡು :

# ಕೆಲವು ಆಶೋತ್ತರಗಳ ನಡುವೆ ಕಲಾಮೇಳ—80

ಕುಂಚದ ಮೂಲಕ ತಮ್ಮ ಮನಸ್ಸನ್ನು ಮತ್ತು ಹೃದಯವನ್ನು ಬಿಚ್ಚಿಕೊಳ್ಳುವ ಮಂದಿ ತುಂಬ ಕಳಕಳಿಯಿಂದ ಕೆಲಸ ಮಾಡಲು ತೊಡಗಿದ್ದಾರೆ. ಇವರೆಲ್ಲರೂ ನಾವು ಹಾಕುವ ಸಾಮಾಜಿಕ ಚೌಕಟ್ಟು ಅಥವಾ ಸಾಮಾಜಿಕ ಬದ್ಧತೆಯ ನೆಪದಲ್ಲಿ ಕೆಲಸ ಮಾಡಲು ತೊಡಗಿದ್ದರೂ ; ಬಣ್ಣಗಳಲ್ಲಿ ತಮ್ಮನ್ನು ಗುರ್ತಿಸಿಕೊಳ್ಳುವಲ್ಲಿ ಗೆಲುವನ್ನು ಹೊಂದಿರುವ ಮಂದಿ ಕರ್ಣಾಟಕದ ಉದ್ದಗಲಕ್ಕೂ ಹರಡುತ್ತಿದ್ದಾರೆ. ಒಂದು ಕಾಲಕ್ಕೆ ನಾವೆಲ್ಲ ಶಾಂತಿನೀಕೇತನದ ಬಗ್ಗೆ ಗ್ಲ್ಯಾಮರ್ಸನ್ನು ಬೆಳೆಸಿಕೊಂಡವರು. ಆದರೆ ಇಂದು ಅದನ್ನು ಮೀರಿ ನಿಲ್ಲುವ ಸಾಧ್ಯತೆಗಳನ್ನು ಕರ್ಣಾಟಕದ ಕಲಾವಿದರು ಪಡೆದಿದ್ದಾರೆ. ಈ ದೃಷ್ಟಿಯಿಂದ ಬೆಂಗಳೂರಿನ 'ಕೇನ್‌ಸ್ಕೂಲ್ ಆಫ್ ಆರ್ಟ್ಸನ್ನ' ನಾವ್ಯಾರು ಮರೆಯುವಂತಿಲ್ಲ. ಅಲ್ಲಿಯ ಹಡಪದ್ ನೀವು ನಾವು ಕರೆಯುವ ಬದ್ಧತೆಯ ಚೌಕಟ್ಟಿನಲ್ಲಿ ಬೆಳೆದವರು. ಆದರೆ ನಾವು ಎಷ್ಟೋ ಬಾರಿ ಈ ಬದ್ಧತೆಯನ್ನು ಸರಳೀಕರಿಸಿ ಹೇಳುವುದರಲ್ಲಿ ತುಂಬ ಭಾವುಕರಾಗಿಯೇ ಉಳಿದುಬಿಟ್ಟಿರುತ್ತೇವೆ.

ಕಳೆದ ಮೇ ತಿಂಗಳ ಕೊನೆಯ ವಾರದಲ್ಲಿ ಬೆಂಗಳೂರಿನ ವೆಂಕಟಪ್ಪ ಗ್ಯಾಲರಿಯಲ್ಲಿ 'ಕಲಾಮೇಳ 80' ನಡೆಯುವಾಗ ; ಅಲ್ಲಿಯ ಹಿರಿಯ ಮತ್ತು ಕಿರಿಯ ಕಲಾವಿದರೊಡನೆ ಒಂದಷ್ಟು ದಿನ ಕಾಲ ಕಳೆಯುವ ಸದವಕಾಶ ಸಿಕ್ಕಿತ್ತು.

ಕಲಾಮೇಳದ ಉದ್ಘಾಟನೆಯ ಸಂದರ್ಭದಲ್ಲಿ ಹಣಕಾಸಿನ ಮಂತ್ರಿ ವೀರಪ್ಪ ಮೊಯ್ಲಿಯವರು ತಾನು ತುಂಬ ಜವಾಬ್ದಾರಿಯಿಂದ ಮಾತಾಡುತ್ತಿದ್ದೇನೆ ಎಂಬ ಅಭಿಮಾನದಿಂದ ಇಂಥ ಕಾರ್ಯಕ್ರಮಗಳಿಗೆ ಮೀಸಲಾದ ಹಣ ದುರುಪಯೋಗವಾಗಬಾರದೆಂದು ಬಳಸಿ–ಬಳಸಿ ಹೇಳುತ್ತಿದ್ದರು. ಕೊನೆಗೆ ಅಧ್ಯಕ್ಷ ಭಾಷಣದಲ್ಲಿ ಹೆಬ್ಬಾರರು ಮಂತ್ರಿಗಳಿಗೆ ಚುರುಕು ಮುಟ್ಟಿಸಿದಾಗ ಎಷ್ಟೋ ಜನಕ್ಕೆ ಸಮಾಧಾನವಾಯಿತು. ಇದನ್ನು ನಾನು ಮೆಚ್ಚಿಕೊಂಡು ಹೊರಗೆ ಬಿ. ವಿ. ಕೆ. ಶಾಸ್ತ್ರಿ ಮತ್ತು ವೈಕುಂಠರಾಜುರವರ ಹತ್ತಿರ ಹೇಳಿದಾಗ : ಶಾಸ್ತ್ರಿಯವರು ಒಂದು ಘಟನೆಯನ್ನು ಹೇಳಿದರು. ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಯಾಗಿದ್ದಾಗ ; ಮಹಾರಾಜ ಕಾಲೇಜಿನಲ್ಲಿ ಕುವೆಂಪು ಅವರಿಗೆ ಸನ್ಮಾನ ಇತ್ತಂತೆ. ಆ ಸಂದರ್ಭದಲ್ಲಿ ಕೆಂಗಲ್‌ರವರು ಉದ್ದ

ಸೆಯು ಭಾಷಣವನ್ನು ಮಾಡುವ ಆತುರದಲ್ಲಿ "ನನಗೂ ಸಮಯ ಸಿಕ್ಕಿದ್ದರೆ ಬೇಕಾದಷ್ಟು ಕವನಗಳನ್ನು ಬರೆಯುತ್ತಿದ್ದೆ" ಅದರಂತೆ. ಆಗ ಕುವೆಂಪುರವರು ತಮ್ಮ ಮಾಮೂಲಿ ಮುಗುಳ್ನಗೆಯಲ್ಲಿ ಸುಮ್ಮನಿದ್ದರಂತೆ. ಹೋಗಲಿ ಇದೆಲ್ಲ ಜುಜುಬಿ ಅಥವಾ ಅರ್ಥಪೂರ್ಣವಿರಬಹುದು. ಆದರೆ ಕಲಾಮೇಳದ ನಂತರದ ಕಾರ್ಯಕ್ರಮಗಳು ಚಿತ್ರಕಲೆಗೆ ಸಂಬಂಧಿಸಿದಂತೆ ಹೊಸ ಆಯಾಮವನ್ನು ಸೃಷ್ಟಿಸಲು ತೊಡಗಿತ್ತು ಎಂಬುದರಲ್ಲಿ ಸಂದೇಹವಿರಲಿಲ್ಲ.

ಬಾಯಿ ಬಿಡದ ಎಷ್ಟೋ ಮಂದಿ ಕಲಾವಿದರು ಬಾಯಿ ಬಿಟ್ಟು ಮಾತಾಡಲು ತೊಡಗಿದ್ದರು. ಕೆಲವರಲ್ಲಿ ಒಂದು ರೀತಿಯ ಅಸಾಮಾಧಾನ ಮತ್ತು ಅತೃಪ್ತಿ ಗೋಚರಿಸುತ್ತಿತ್ತು. ಇಲ್ಲಿ ಜಾತೀಯತೆ ಇದೆ—ಅದರ ಮೂಲಕ ರಾಜಕೀಯ ನಡೆಸ್ತಾರೆ ಎಂಬ ಗೊಣಗಾಟ ಎದ್ದು ಕಾಣಿಸುತ್ತಿತ್ತು. ಆದರೆ ಇದನ್ನೆಲ್ಲ ಮರೆತು ಗ್ಯಾಲರಿಯ ಸುತ್ತ ಕಬ್ಬನ್‌ಪಾರ್ಕಿನ ಗಿಡಮರಗಳ ನೆರಳಿನಲ್ಲಿ ಬಣ್ಣ ಬಿಡಿಸುವುದನ್ನು ಕಂಡಾಗ ಅಭಿಮಾನ ಮೂಡುತ್ತಿತ್ತು.

'ಕಲಾಮೇಳ 80' ರಲ್ಲಿ ದಿನಾ ಸಂಜೆ ಬೇರೆ ಬೇರೆ ವಿಷಯಕ್ಕೆ ಸಂಬಂಧಿಸಿದಂತೆ ಗೋಷ್ಠಿಗಳಿರುತ್ತಿದ್ದವು. ಅದರಲ್ಲಿ ಕೆಲವರು ಮಾತಾಡಬೇಕೆಂಬ ಹಠದಿಂದ ಮಾತಿಗೆ ನಿಂತಾಗ ಬೋರ್ ಮಾಡುತ್ತಿದ್ದರು. 'ಅದರಲ್ಲೂ ಚರ್ಚೆಗೆ ಸಂಬಂಧಿಸಿದಂತೆ ಕಲಾವಿದೆ ಶಣೈ ಮತ್ತು ಹುಬ್ಳೀಕರರವರಿಗೆ ಎಲ್ಲಿಲ್ಲದ ಉತ್ಸಾಹ. ಆದರೆ ಈ ಉತ್ಸಾಹಕ್ಕೆ ಸ್ವಲ್ಪ ಬುದ್ಧಿ ಇಲ್ಲದಿದ್ದರೆ ದಡ್ಡರೆಂದು ಬ್ರ್ಯಾಂಡಾಗುವುದು ಸ್ವಾಭಾವಿಕ. ಇಂಥ ಕೆಲಸವನ್ನು ಶಣೈ ಮತ್ತು ಹುಬ್ಳೀಕರ್ ಮಾಡುತ್ತಿದ್ದರು. ಇವರ ನಡುವೆ ಇಲ್ಲಿ ಏನಾದರೂ ಆಗಬೇಕೆಂಬ ಪ್ರಾಮಾಣಿಕ ಸಿಟ್ಟನ್ನು ಹೊಂದಿದ್ದ ಮರಿಶಾಮಾಚಾರ್, ರಾಮದಾಸ್ ಕೃಷ್ಣಶೆಟ್ಟಿ ಮತ್ತು ಉಮೇಶ್‌ರವರನ್ನು ಮರೆಯುವಂತಿಲ್ಲ. ಇಷ್ಟೆಲ್ಲ ನಡೆಯುವಾಗ ನಮ್ಮಲ್ಲಿಯ ಹಿರಿಯ ಕಲಾವಿದರಾದ ಹಡಪದ್‌ರವರಾಗಲಿ, ವಾಸುದೇವ್‌ರವರಾಗಲಿ ತಮ್ಮ ಮಾಮೂಲಿ ಸ್ಥಿತಪ್ರಜ್ಞೆಯಿಂದ ಹೊರಗೆ ಬರುತ್ತಿರಲಿಲ್ಲ. ಲಂಕೇಶ್‌ರವರು ಸಾಮಾಜಿಕ ಬದ್ಧತೆ ಅಥವಾ ಸಾಮಾಜಿಕ ಜವಾಬ್ದಾರಿಯ ಬಗ್ಗೆ ಮಾತಾಡುತ್ತ ವಾಸುದೇವ್‌ರವರನ್ನು ಛೇಡಿಸುವಾಗಲೂ ವಾಸುದೇವ್‌ರವರು ಇದನ್ನೆಲ್ಲ ಮೀರಿ ರಾಷ್ಟ್ರ ಮಟ್ಟದಲ್ಲಿ ಬೆಳೆದಿದ್ದೇನೆ ಎಂಬ ಬಿಗುಮಾನವನ್ನು ಹೊಂದಿದ್ದಂತೆ ಕಾಣುತ್ತಿತ್ತು. ಶಿಕ್ಷಣ ಮತ್ತು ಚಿತ್ರಕಲೆಗೆ ಸಂಬಂಧಿಸಿದಂತೆ ಹಡಪದ್‌ರವರ ಮಾತುಗಳು ಅವರ ಚಿತ್ರಗಳಷ್ಟೇ ಅರ್ಥಪೂರ್ಣವಾಗಿದ್ದವು.

ಎಲ್ಲೆಲ್ಲೋ ಶಿಕ್ಷಣ ಪಡೆಯುತ್ತಿರುವ ಮತ್ತು ಪಡೆದು ಬಂದಿರುವ ಇವರ ಚಿತ್ರಗಳ ಪ್ರದರ್ಶನವನ್ನು ನೋಡಿದಾಗ ನಾನೊಬ್ಬ ಸಾಮಾನ್ಯ ಅಬ್ಸರ್ವರ್ ಆಗಿ ಹೆಚ್ಚು ತೃಪ್ತಿಯನ್ನು ಪಡೆದಿದ್ದೆ. ಇಲ್ಲಿಯ ಚಂದ್ರನಾಥ, ಯೂಸುಫ್, ಚಂದ್ರಶೇಖರ, ರಾಮದಾಸ್, ಸುಬ್ಬಣ್ಣ, ಬಿ. ಎ. ಸುರೇಶ್, ಉಮೇಶ್, ಶೀಲಾಗೌಡ ಮತ್ತು ಕೆ. ಟಿ. ಶಿವಪ್ರಸಾದ್‌ರವರ ಚಿತ್ರಗಳನ್ನು ನೋಡಿದಾಗ ಬೆಳೆಯುವ ಕಲಾವಿದರ ನಡುವೆ ಒಂದಷ್ಟು ದಿನ ಕಳೆದೆನಲ್ಲ ಎಂಬ ತೃಪ್ತಿಯಿತ್ತು. ಇವರ ಹಾಸ್ಯ ತುಂಟತನ ತುಂಬ ಮಾರ್ಮಿಕವಾಗಿತ್ತು. ಹಾಗೆಯೇ ತುಂಬು ನಗೆಯ ಮಧ್ಯೆ ಕಬ್ಬಿಣದ ಚೂರುಗಳಿಗೆ ಜೀವ ಕೊಡುತ್ತ ಲಿಪಸ್ಟಿಕ್ ನಡುವೆ ಮದ್ರಾಸ್ ಕನ್ನಡದಲ್ಲಿ ಮಾತಾಡುತ್ತ ತಿರುಗುತ್ತಿದ್ದ ಸೀತಾಕುಮಾರಿ ಹಾಗೂ ಅಪ್ಪನನ್ನ ಮೆಚ್ಚಿಸೋದಕ್ಕೆ (ಎಚ್. ಎಲ್. ನಾಗೇಗೌಡರ) ಎಕ್ಸಟರ್ನಲ್ ಬಿ. ಎ. ಥರ್ಡ್ ಕ್ಲಾಸಿನಲ್ಲಿ ಪಾಸು ಮಾಡಿದೆ ಎಂಬ ಸರಳ ಸ್ವಭಾವದ ಶೀಲಾ ಗೌಡರನ್ನು ಮರೆಯುವಂತಿಲ್ಲ. ಕಲಾಮೇಳಕ್ಕೆ ಮತ್ತೊಂದು ಅರ್ಥದಲ್ಲಿ ಜೀವ ತುಂಬಿದ ವ್ಯಕ್ತಿ ಎಂದರೆ, ಎನ್. ಕೆ. ಕೃಷ್ಣನ್. ಈ ಮನುಷ್ಯ ಭಾರತದ ಚಿತ್ರಕಲೆ ಮತ್ತು ಶಿಲ್ಪಕಲೆಯ ಬೆಳವಣಿಗೆಗೆ ಸಂಬಂಧಿಸಿದಂತೆ ನೀಡಿದ ಮಾಹಿತಿ ಮತ್ತೆ ಮತ್ತೆ ನೆನಪು ಮಾಡಿಕೊಳ್ಳುವಂಥದ್ದು.

ಕಲಾಮೇಳ ಅಚ್ಚುಕಟ್ಟಾಗಿ ನಡೆಯಲು ಕಾರಣರಾದ ಮರಿಶಾಮಾಚಾರ್ ಮತ್ತು ಕೆಲವು ಸಾರಿ ಬ್ರಾಹ್ಮಣರಂತೆ ಕೆಲವು ಸಾರಿ ಶೂದ್ರರಂತೆ ನಡೆದುಕೊಳ್ಳುತ್ತಿದ್ದ ನರ್ಸುರಿನ್‌ರವರ ಶ್ರಮಕ್ಕೆ ಅಭಿನಂದಿಸಬೇಕು.

**ಮೂರು :**

## ಪಬ್ಲಿಕ್ ಬಾರ್

ನಮ್ಮ ಜನ ಹವಾನಿಯಂತ್ರಿತ ಬಾರುಗಗಲ್ಲಿ ಕೂತು ಹೊರಗಡೆ ಮಾತಾಡಲಾಗದ ಮಾತುಗಳಿಗೆ ಜೀವ ಕೊಡುವುದು ಲಕ್ಸುರಿ ಇರಬಹುದು. ಅಥವಾ ಸ್ವಾಭಾವಿಕವೆಂದು ಘಟನೆಗಳಿಗೆ ಒತ್ತುಕೊಡದೆ ಪರಕೀಯತೆಯನ್ನನುಭವಿಸಬಹುದು. ಇದೇನೆ ಇರಲಿ ಮೊನ್ನೆ ಒಂದು ಘಟನೆ ನಡೆಯಿತು. ನನ್ನ ಗೆಳೆಯನಿಗೆ ಪತ್ರ ಬರೆದಿದ್ದೆ–ಸಂಜೆ ಸೆಂಟ್ರಲ್ ಕಾಲೇಜಿನ ಹತ್ತಿರ ನೋಡುವೆ ಎಂದು. ಆದ್ದರಿಂದ ಪ್ರೆಸ್ಸಿನಿಂದ ಲಾಲ್‌ಭಾಗ್ ಪಶ್ಚಿಮದ್ವಾರದಿಂದ ಬಸ್ಸು ಹಿಡಿಯುವುದಕ್ಕಾಗಿ ಹೋಗುತ್ತಿದ್ದೆ. ಸಜ್ಜನ್

ರಾವ್ ಸರ್ಕಲ್ ಬಳಿ ಒಂದು ಶ್ರೀರಾಮ ಮಂದಿರವಿದೆ. ಸಂಜೆಯಾದರೆ ಸಾಕು ಜನ ತುಂಬುತ್ತಾರೆ. ಕೆಲವರ ಮೈಮೇಲೆಯಂತೂ ಒಡವೆಗಳು ಕಬ್ಬಿಣದ ಸರಿಪಳಿಗಳ ರೀತಿ ಯಲ್ಲಿ ನೇತಾಡುತ್ತಿರುತ್ತವೆ. ಇಲ್ಲಿಂದ ಐವತ್ತು ಗಜದ ದೂರದಲ್ಲಿ ಒಂದು ಸಾರ್ವ ಜನಿಕ ಯೂರಿನ್ ಹೌಸ್ ಇದೆ. ನಾನು ಅಲ್ಲಿಗೆ ಹೋದೆ. ಒಂದುಕ್ಷಣ ಗಾಭರಿ ಯಿಂದ ಅಲ್ಲಿಯೇ ನಿಂತುಕೊಂಡೆ. ಸುಮಾರು 35 ವರ್ಷದ ಒಬ್ಬ ವ್ಯಕ್ತಿಯು ಕೈಯಲ್ಲಿ ಬ್ರಾಂದಿ ಬಾಟಲ್ ಇತ್ತು. ಯೂರಿನರ್ಸ್ ಸಂಬಧಿಸಿದಂತೆ ಹಾಕಿದ್ದ ಪೈಪ್‌ನಲ್ಲಿ ನೀರು ಸೋರುತ್ತಿತ್ತು. ಆ ನೀರನ್ನು ಬಾಟಲ್‌ನ ಬ್ರಾಂದಿಗೆ ಸ್ವಲ್ಪ ಸ್ವಲ್ಪವೇ ಮಿಕ್ಸ್ ಮಾಡಿ ಕೊಂಡು ಕುಡಿಯುತ್ತಿದ್ದ. ನಾನು ಬೇರೆಲ್ಲಿ ಜಾಗವಿಲ್ಲವಾ ? ಅಂದೆ. ಆತ ಸಿಟ್ಟಿ ನಿಂದ ; ಸುಮ್ಮನೆ ಮುಚ್ಚಿಕೊಂಡು ಹೋಗಯ್ಯ. ನೀನೇನು ಬಾರ್‌ನಲ್ಲಿ ಕುಡಿಯೋ ದಕ್ಕೆ ದುಡ್ಡು ಕೊಡ್ತೀಯಾ ? ಅಂದ. ನನ್ನ ಉತ್ತರವಿಲ್ಲದ್ದರಿಂದ ಸುಮ್ಮನೆ ಬಂದೆ ನಿಮ್ಮ ಮಡಿವಂತಿಕೆಯ ಮೂಲಕ ಈ ಪೀಸ್ ಬೇಸರವಾದರೆ ದಯವಿಟ್ಟು ಓದಿಕೊಳ್ಳ ಬೇಡಿ.

## ತಿಂಗಳ ತಿಪ್ಪೇಗುಂಡಿ:

ಪ್ರೀತಿಯ ಓದುಗರಲ್ಲಿ ಒಂದು ವಿನಂತಿ. ಈ ಸಾರಿಯ ಶೂದ್ರದಿಂದ 'ತಿಂಗಳ ತಿಪ್ಪೇಗುಂಡಿ' ಎಂಬ ವೇದಿಕೆಯನ್ನು ಪ್ರಾರಂಭಿಸುತ್ತಿದ್ದೇವೆ. ಇದಕ್ಕೆ ಮುಖ್ಯಕಾರಣ ಕೆಲವು ವಸ್ತುಗಳನ್ನು ತಿಪ್ಪೇಗುಂಡಿಗೆ ಹಾಕಿದರೆ ಗೊಬ್ಬರವಾಗುವುದಿಲ್ಲ. ಉದಾಹರ ಣೆಗೆ, ಗಾಜಿನ ಚೂರು, ಕಬ್ಬಿಣದ ಚೂರು ಮತ್ತು ಮೊಳೆಗಳು. ಇದೇ ರೀತಿಯಲ್ಲಿ ದಿನನಿತ್ಯದ ಬದುಕಿನಲ್ಲಿ ನಮ್ಮ ಸುತ್ತ ನಾನಾ ಚಿಲ್ಲರೆ ಕೆಲಸಗಳು ನಡೆಯುತ್ತಿರುತ್ತವೆ. ಅಂಥವು ಪತ್ರಿಕೆಗಳಲ್ಲಿ ಬಂದಿರಬಹುದು ಅಥವಾ ನೀವು ನೋಡಿರುವ – ಕೇಳಿರುವ ವಿಷಯಗಳನ್ನು ನಿಮ್ಮ ಭಾಷೆಯಲ್ಲಿ ಷೇಪ್ ಎತ್ತುವುದರ ಮೂಲಕ ಗೇಲಿ ಮಾಡ ಬಹುದೆನ್ನಿಸುತ್ತೆ.

**ಶುಕ್ರವಾರದ ವೇಳೆಗೆ ಕೆ. ಆರ್. ಎಸ್. ಭರ್ತಿ-ರಾವ್‌ರಿಂದ ಪೂಜೆ**

ಮುಖ್ಯಮಂತ್ರಿ ಗುಂಡೂರಾವ್ ಅವರು ಜುಲೈ ಹನ್ನೊಂದರಂದು ಬೆಳಿಗ್ಗೆ ೯-೩೦ ಕ್ಕೆ ಕೃಷ್ಣರಾಜ ಸಾಗರದಲ್ಲಿ ಕಾವೇರಿ ಮಾತೆಗೆ ಪೂಜೆ ಸಲ್ಲಿಸಲಿದ್ದು, ಆ ವೇಳೆಗೆ ಜಲಾಶಯದ ನೀರು ಪರಮಾವಧಿ ಮಟ್ಟವನ್ನು ಮುಟ್ಟಲಿದೆ.

ಪ್ರಜಾವಾಣಿ ೧೦–೭–೮೦

**ತುಂಬಿ ಬಂದ ಕಾವೇರಿಗೆ ಪೂಜೆ**

ಮೈಸೂರು, ಜುಲೈ ೧೧–ಕರ್ನಾಟಕ ಮತ್ತು ತಮಿಳ್ನಾಡು ಜನತೆಯ ಆಶೋ ತರ್ತಗಳ ದ್ಯೋತಕವಾಗಿ ಕೃಷ್ಣರಾಜಸಾಗರದ ಅಣೆಕಟ್ಟಿನ ಮೇಲೆ ನಿಂತಿರುವ ತಾಯಿ

ಕಾವೇರಿಗೆ ಮುಖ್ಯಮಂತ್ರಿ ಆರ್. ಗುಂಡೂರಾವ್ ಅವರು ಇಂದು ಪೂಜೆ ಸಲ್ಲಿಸಿದರು.

ಎಂಜಿನಿಯರುಗಳ ಕೌಶಲ್ಯದಿಂದಾಗಿ ಸಮಾರಂಭದ ಸಂದರ್ಭದಲ್ಲಿ ಕೃಷ್ಣರಾಜ ಸಾಗರದ ನೀರು ಪೂರ್ಣಮಟ್ಟದ (೧೨೪) ಗೆರೆಗೆ ತಾಕುತ್ತಿತ್ತು.

ಪವಿತ್ರ ಕಾವೇರಿಯ ಉಗಮಸ್ಥಾನವಾದ ಕಾವೇರಿಯ ವರಪುತ್ರರಾದ ಗುಂಡೂರಾವ್ ಅವರು ತಾಯಿ ಕಾವೇರಿಗೆ ಪೂಜೆ ಸಲ್ಲಿಸಿದ್ದು ಔಚಿತ್ಯಪೂರ್ಣವಾಗಿತ್ತು.

**ಪ್ರತ್ಯಕ್ಷದರ್ಶಿ** :—ಶ್ರಿಮಾನ್ ಗುಂಡೂರಾವ್‌ರವರು ಪೂಜೆ ಸಲ್ಲಿಸುತ್ತಿದ್ದು ಕಾವೇರಿ ಮಾತೆ ಪ್ರತ್ಯಕ್ಷವಾಗಿ ; ಎಲೈ ಭಕ್ತನೇ ನೀನು ಸಾಕಷ್ಟು ಗದೆಗಳನ್ನು ಪಡೆದು ಪುನೀತನಾಗಿದ್ದೀಯೆ, ಆದ್ದರಿಂದ ನೀನೊಂದು ಕೆಲಸ ಮಾಡಿಕೊಡಬೇಕು ಭಕ್ತನೇ. ಬೆಂಗಳೂರಿನ ಕೆ. ಇ. ಬಿ. ಕಟ್ಟಟದ ಮುಂದೆ ನನ್ನ ಪ್ರತಿಮೆಯಿದೆ. ಅದೇ ರೀತಿಯ ಆನೆ ನಡುವಿನ ಒಂದು ಪ್ರತಿಮೆಯುನ್ನು ಮಾಡಿಸುವನಾಗು ಅಂದಳು. ಗುಂಡೂರಾವ್ ತಲೆ ತಗ್ಗಿಸಿ ನಮಸ್ಕರಿಸಿದಾಗ ಗುಂಡೂರಾವ್‌ರವರ ಕಪ್ಪು ಕನ್ನಡಕ ಕೆಳಕ್ಕೆ ಬಿತ್ತು. ಆಗ ಕಾವೇರಿ ಮಾತೆ ಅದನ್ನು ಗುಂಡೂರಾವ್‌ರವರ ಕಣ್ಣಿಗೆ ಸಿಕ್ಕಿಸುತ್ತಾಳೆ. ಶ್ರೀಮತಿ ವರಲಕ್ಷ್ಮಿ ಗುಂಡೂರಾವ್‌ರವರು ಸಿಟ್ಟಿನಿಂದ ಪಕ್ಕಕ್ಕೆ ಮುಖ ತಿರುಗಿಸುವರು. ಇದೇ ಸಮಯಕ್ಕೆ ಸ್ಲೇಟು ಬಳಪದ ಸಮೇತ ಮುಂದೆ ಬಂದ ವರದಿಕಾರರು ಕಾವೇರಿ ಮಾತೆಗೆ ಶ್ರೀಮತಿ ರಾವ್‌ರವರನ್ನ ಕಾವೇರಿ ಮಾತೆಗೆ ಪರಿಚಯಿಸುತ್ತ ; ಈಕೆ ಪವಿತ್ರ ಗುಂಡೂರಾವ್‌ರವರ ಪವಿತ್ರ ಪತ್ನಿ ಎಂದಾಗ, ಆಕೆಯುನ್ನು ಎತ್ತಿಕೊಂಡು ತನ್ನ ಆನೆಯ ನಡುವಿನ ಮೇಲೆ ಕೂರಿಸಿಕೊಂಡಳು. ಆಗ ಸ್ಲೇಟು ಬಳಪದ ವರದಿಗಾರ ; ಕಾವೇರಿಗೆ ನಾನು ಸೌಂದರ್ಯ ಮೀಮಾಂಸೆಯುನ್ನು ಬರೆಯುತ್ತಿದ್ದೇನೆ ಎನ್ನುವನು.

—o—

"we have now the beginings of the theory, but there is still no political leader on the horizon capable of converting this theory in to political slogan yet I am strongly convinced that as the movement grows stronger, these political leaders will also emerge"

George lukac.

ಆಯಾ ತಿಂಗಳಲ್ಲಿ ನಿಮಗೆ ಶೂದ್ರ ತಲಪದಿದ್ದರೆ ದಯವಿಟ್ಟು ಪತ್ರ ಬರೆಯಿರಿ

ಸಂ :

# ಒಳನೋಟ

ಶೂದ್ರ ಚೆನ್ನಾಗಿ ಬರುತ್ತಿದೆ. ಶ್ರೀ ವೆಂಕಟರಾಂರವರ ಲೇಖನದಲ್ಲಿ ಕೆಲವು ವಿಚಾರಗಳು ಹೊಸ ಪ್ರಶ್ನೆಗಳನ್ನು ಎತ್ತುತ್ತವೆ. ಲೇಖನ ಚೆನ್ನಾಗಿದೆ. ಕುಂ. ವೀರಭದ್ರಪ್ಪನವರ ಕವನ ಚೆನ್ನಾಗಿದೆ. ಕೋಟೆಯೊಳಗಿನ ಹೆಂಗಸರು ಅಂತಹ ಲೇಖನಗಳು ಬೇರೆಲ್ಲೂ ಸಿಗದಂತಹ ವರ್ತಮಾನಗಳು. 'ದೇವಿಡ್‌ಲಿವಿನ್'ರ ರೇಖಾ ಚಿತ್ರ (ಇಂದಿರಾ ಗಾಂಧಿ) ತುಂಬಾ ಚೆನ್ನಾಗಿದೆ. ಒಟ್ಟಿನಲ್ಲಿ ಶೂದ್ರ ಇಲ್ಲಿವರೆಗೂ ತನ್ನತನವನ್ನು ಎಚ್ಚರಿಕೆಯಿಂದ ಕಾಯ್ದುಕೊಂಡಿದೆ. ನನಗಂತೂ ಅದು ತುಂಬಾ ಸಂತೋಷವನ್ನು ಕೊಟ್ಟಿದೆ.

**ಕಡಿದಾಳ್ ಶಾಮಣ್ಣ**
ಭಗವತಿ ಕೆರೆ

